**ನಹಿ ಕಷಾಯ್ ಉಪ್‌ಶಾಂತತಾ, ನಹಿ ಅಂತರ್ ವೈರಾಗ್ಯ ।**
**ಸರಳ್‌ಪಣುಂ ನ ಮಧ್ಯಸ್ಥತಾ, ಏ ಮತಾರ್ಥಿ ದುರ್ಭಾಗ್ಯ ॥32॥**

ಯಾರಲ್ಲಿ ಕ್ರೋಧ, ಮಾನ, ಮಾಯಾ ಮತ್ತು ಲೋಭ ಈ ಕಷಾಯಗಳು ಇನ್ನೂ ಕೃಶತೆಯನ್ನು ಹೊಂದಿರುವುದಿಲ್ಲವೋ ಮತ್ತು ಆಂತರಿಕ ವೈರಾಗ್ಯವೂ ಉತ್ಪನ್ನವಾಗಿಲ್ಲವೋ ಯಾರ ಆತ್ಮನಲ್ಲಿ ಗುಣಗ್ರಹಣೆ ಮಾಡುವ ಸರಳತೆಯೂ ಇರುವುದಿಲ್ಲವೋ ಇಂಥ ಮತಾರ್ಥಿಜೀವರು ಭಾಗ್ಯಹೀನರು. ಅಂದರೆ ಜನ್ಮ, ಜರಾ, ಮರಣಗಳನ್ನು ನಾಶ ಮಾಡುವ ಮೋಕ್ಷಮಾರ್ಗವನ್ನು ಸಂಪಾದನೆಯ ಯೋಗ್ಯತೆ ರೂಪ ಭಾಗ್ಯವು ಇವರಿಗಿಲ್ಲವೆಂದು ತಿಳಿಯಬೇಕು.

**ಲಕ್ಷಣ್ ಕಹ್ಯಾಂ ಮತಾರ್ಥಿನಾಂ, ಮತಾರ್ಥ್ ಜಾವಾ ಕಾಜ್ ।**
**ಹವೇ ಕಹುಂ ಆತ್ಮಾರ್ಥಿನಾಂ, ಆತ್ಮ-ಅರ್ಥ ಸುಖ್ ಸಾಜ್ ॥33॥**

ಈ ಪ್ರಕಾರ ಮತಾರ್ಥಿಜೀವನ ಲಕ್ಷಣವನ್ನು ಹೇಳಿದೆ. ಇದನ್ನು ತಿಳಿದುಕೊಂಡು ಜೀವರ ಮತಾರ್ಥವು ದೂರವಾಗಬೇಕೆಂದೇ ಇದನ್ನು ಇಲ್ಲಿ ವಿವರಿಸಿದೆ. ಇನ್ನು ಆತ್ಮಾರ್ಥಿಜೀವರ ಲಕ್ಷಣವು ಹೇಳಲಾಗುತ್ತದೆ. ಆ ಲಕ್ಷಣ ಹೇಗಿದೆ? ಅದು ಆತ್ಮನನ್ನು ಅವ್ಯಾಬಾಧ ಸುಖದ ಸ್ಥಿತಿಯಲ್ಲಿ ನಿಲ್ಲಿಸುವುವಕ್ಕೆ ಸಾಧನವಾಗಿದೆ.

**ಆತ್ಮಾರ್ಥಿ ಲಕ್ಷಣ :-**

**ಆತ್ಮಜ್ಞಾನ್ ತ್ಯಾಂ ಮುನಿಪಣುಂ, ತೇ ಸಾಚಾ ಗುರು ಹೋಯ್ ।**
**ಬಾಕೀ ಕುಳ್‌ಗುರು ಕಲ್ಪನಾ, ಆತ್ಮಾರ್ಥೀ ನಹಿ ಜೋಯ್ ॥34॥**

ಆತ್ಮಜ್ಞಾನವಿದ್ದಲ್ಲಿಯೇ ಮುನಿಪದವು ಇರುತ್ತದೆ. ಆತ್ಮಜ್ಞಾನವಿಲ್ಲದಲ್ಲಿ ಮುನಿತ್ವವು ಸಂಭವಿಸುವುದಿಲ್ಲ. "ಜಂ ಸಮಂತಿ ಪಾಸಹ ತಂಮೋಣಂತಿ ಪಾಸಹ" ಎಲ್ಲಿ ಸಮಕಿತ ಅರ್ಥಾತ್ ಆತ್ಮಜ್ಞಾನವು ಇದೆಯೋ ಅದೇ ಮುನಿಪದವಾಗಿದೆ. ಹೀಗೆ ಆಚಾರಾಂಗ ಸೂತ್ರದಲ್ಲಿ ಹೇಳಿದೆ. ಆದ್ದರಿಂದ ಆತ್ಮಾರ್ಥಿ ಜೀವನು ಯಾರಲ್ಲಿ ಆತ್ಮಜ್ಞಾನವು ಇರುವುದೋ ಅವನನ್ನೇ ಸದ್ಗುರು ಎಂದು ತಿಳಿಯುವುದು ಕೇವಲ ಕಲ್ಪನೆ. ಇದರಿಂದೇನೂ ಸಂಸಾರದ ನಾಶವು ಆಗುವುದಿಲ್ಲ.

**ಪ್ರತ್ಯಕ್ಷ್ ಸದ್ಗುರು ಪ್ರಾಪ್ತಿನೋ, ಗಣೇ ಪರಮ್ ಉಪ್‌ಕಾರ್ ।**
**ತ್ರಣೇ ಯೋಗ್ ಏಕತ್ವಥೀ, ವರ್ತೇ ಆಜ್ಞಾಧಾರ್ ॥35॥**

ಅವನು ಪ್ರತ್ಯಕ್ಷ ಸದ್ಗುರುವು ಲಭಿಸುವುದೆಂದರೆ ದೊಡ್ಡ ಉಪಕಾರವೆಂದು ತಿಳಿಯುತ್ತಾನೆ. ಯಾಕೆಂದರೆ ಶಾಸ್ತ್ರಾದಿಗಳಿಂದ ಸಮಾಧಾನವಾಗದಂಥ ವಿಷಯಗಳಿಗೆ ಸದ್ಗುರುವಿನಿಂದ ಸಮಾಧಾನವು ಲಭಿಸುತ್ತದೆ. ಅಲ್ಲದೆ ಕೆಲವೊಂದು ದೋಷಗಳು ಸದ್ಗುರುವಿನ ಆಜ್ಞೆಯನ್ನು ಧಾರಣೆ ಮಾಡದ ಹೊರತು ದೂರವಾಗುವುದಿಲ್ಲ. ಅಂಥವೂ ಸಹ ಸದ್ಗುರುವಿನಿಂದ ದೊರಗೊಳ್ಳುತ್ತವೆ. ಆದ್ದರಿಂದ ಪ್ರತ್ಯಕ್ಷ ಸದ್ಗುರು ಸಮಾಗಮವು ದೊಡ್ಡ ಉಪಕಾರವೆಂದು ಭಾವಿಸುತ್ತಾನೆ ಮತ್ತು ಅಂಥ ಸದ್ಗುರುವಿನ ಹತ್ತಿರ ಮನ, ವಚನ ಮತ್ತು ಕಾಯಗಳಲ್ಲಿ ಏಕರೂಪವಾಗಿ ಆಜ್ಞಾನುವರ್ತಿಯಾಗಿ ನಡೆಯುತ್ತಾನೆ.

**ಏಕ್ ಹೋಯ್ ತ್ರಣ್ ಕಾಳಮಾಂ, ಪರಮಾರ್‌ಥನೋ ಪಂಥ್ ।**
**ಪ್ರೇರೇ ತೇ ಪರಮಾರ್ಥನೇ, ತೇ ವ್ಯವಹಾರ್ ಸಮಂತ್ ॥36॥**

ಮೂರೂ ಕಾಲಗಳಲ್ಲಿಯೂ ಪರಮಾರ್ಥ ಪಂಥವು ಅಂದರೆ ಮೋಕ್ಷ ಮಾರ್ಗವು ಒಂದೇ ಆಗಿರಲೇ ಬೇಕು ಮತ್ತು ಯಾವುದರಿಂದ ಆ ಪರಮಾರ್ಥದ ಸಿದ್ಧಿ ಯಾಗುತ್ತದೋ ಆ ವ್ಯವಹಾರವನ್ನೇ ಜೀವರು ಮಾನ್ಯ ಮಾಡಬೇಕು. ಅನ್ಯವ್ಯವಹಾರವನ್ನು ಮಾನ್ಯ ಮಾಡಬಾರದು.

ಏಮ್ ವಿಚಾರೀ ಅಂತರೇ, ಶೋಧೇ ಸದ್ಗುರು ಯೋಗ್ ।
ಕಾಮ್ ಏಕ್ ಆತ್ಮಾರ್ಥನುಂ, ಬೀಜೋ ನಹಿ ಮನ್‌ರೋಗ್ ॥37॥

ಈ ಪ್ರಕಾರ ಮನಸ್ಸಿನಲ್ಲಿ ವಿಚಾರಮಾಡಿ ಯಾವನು ಸದ್ಗುರು ಸಮಾಗಮದ ಶೋಧವನ್ನು ಮಾಡುತ್ತಾನೋ ಮತ್ತು ಕೇವಲ ಆತ್ಮಾರ್ಥವನ್ನೇ ಬಯಸುತ್ತಾನೋ, ಮಾನ-ಪೂಜೆ, ಋದ್ಧಿ-ಸಿದ್ಧಿ ಮೊದಲಾದುವುಗಳನ್ನು ಇಚ್ಛಿಸುವುದಿಲ್ಲವೋ ಈ ಮಾನಸಿಕ ರೋಗವು ಯಾರ ಮನಸ್ಸಿನಲ್ಲಿ ಇಲ್ಲವೋ

ಕಷಾಯ್‌ನೀ ಉಪ್‌ಶಾಂತ್‌ತಾ, ಮಾತ್ರಮೋಕ್ಷ್ ಅಭಿಲಾಷ್ ।
ಭವೇ ಖೇದ್, ಪ್ರಾಣೀದಯಾ, ತ್ಯಾಂ ಆತ್ಮಾರ್ಥ್ ನಿವಾಸ್ ॥38॥

ಯಾರಲ್ಲಿ ಕಷಾಯಗಳು ಕೃಶವಾಗಿವೆಯೋ ಕೇವಲ ಒಂದು ಮೋಕ್ಷ ಪದವನ್ನು ಬಿಟ್ಟು ಇನ್ನಾವ ಪದದ ಅಭಿಲಾಷೆಯೂ ಇಲ್ಲವೋ, ಸಂಸಾರದಲ್ಲಿ ವೈರಾಗ್ಯವೂ ಪ್ರಾಣಿಗಳಲ್ಲಿ ದಯೆಯೂ ಇದೆಯೋ ಇಂಥ ಜೀವನಲ್ಲಿ ಆತ್ಮಾರ್ಥದ ನಿವಾಸವಿದೆ.

ದಶಾ ನ ಏವೀ ಜ್ಯಾಂ ಸುಧೀ, ಜೀವ್ ಲಹೇ ನಹಿ ಜೋಗ್ ।
ಮೋಕ್ಷ್‌ಮಾರ್ಗ್ ಪಾಮೇ ನಹೀ, ಮಟೇ ನ ಅಂತರ್ ರೋಗ್ ॥39॥

ಎಲ್ಲಿಯುವರೆಗೆ ಇಂಥ ಯೋಗಸ್ಥಿತಿಯನ್ನು ಜೀವನು ಹೊಂದುವುದಿಲ್ಲವೋ ಅಲ್ಲಿಯುವರೆಗೆ ಅವನಿಗೆ ಮೋಕ್ಷಮಾರ್ಗವು ಪ್ರಾಪ್ತಿಯಾಗುವುದಿಲ್ಲ. ಅಲ್ಲದೆ ಆತ್ಮಭ್ರಾಂತಿರೂಪದಲ್ಲಿರುವ ಅನಂತ ದುಃಖದ ಹೇತುವೆನಿಸುವ ಅಂತರರೋಗವು ನಾಶವಾಗುವುದಿಲ್ಲ.

ಆವೇ ಜ್ಯಾಂ ಏವೀ ದಶಾ, ಸದ್ಗುರುಬೋಧ್ ಸುಹಾಯ್ ।
ತೇ ಬೋಧೇ ಸುವಿಚಾರ್‌ಣಾ, ತ್ಯಾಂ ಪ್ರಗಟೇ ಸುಖ್‌ದಾಯ್ ॥40॥

ಎಲ್ಲಿ ಇಂಥ ದಶೆಯು ಇರುವುದೋ ಅಲ್ಲಿ ಸದ್ಗುರುವಿನ ಬೋಧನೆ ಶೋಭಿಸುತ್ತದೆ. ಅದು ಅಲ್ಲಿ ಪರಿಣಾಮವಾಗುತ್ತದೆ. ಆ ಜ್ಞಾನದ ಪರಿಣಾಮದಿಂದ ಸುಖದಾಯಕವಾದ ಸುವಿಚಾರಸ್ಥಿತಿಯು ಪ್ರಕಟವಾಗುತ್ತದೆ.

ಜ್ಯಾ ಪ್ರಗಟೇ ಸುವಿಚಾರಣಾ, ತ್ಯಾಂ ಪ್ರಗಟೇ ನಿಜ್‌ಜ್ಞಾನ್ ।
ಜೇ ಜ್ಞಾನೇ ಕ್ಷಯ್ ಮೋಹ್ ಥಈ, ಪಾಮೇ ಪದ್ ನಿರ್ವಾಣ್ ॥41॥

ಎಲ್ಲಿ ಸುವಿಚಾರ ಸ್ಥಿತಿಯು ಪ್ರಕಟವಾಗುವುದೋ ಅಲ್ಲಿ ಆತ್ಮಜ್ಞಾನವು ಉತ್ಪನ್ನವಾಗುವುದು. ಆ ಜ್ಞಾನದಿಂದ ಮೋಹವನ್ನು ಕ್ಷಯಗೊಳಿಸಿ ಆತ್ಮನು ನಿರ್ವಾಣಪದವನ್ನು ಹೊಂದುತ್ತಾನೆ.

ಊಪಜೇ ತೇ ಸುವಿಚಾರಣಾ, ಮೋಕ್ಷ್‌ಮಾರ್ಗ್ ಸಮ್‌ಜಾಯ್ ।
ಗುರು ಶಿಷ್ಯ ಸಂವಾದಥೀ, ಭಾಖುಂ ಷಟ್ಪದ್ ಆಂಹಿ ॥42॥

ಯಾವುದರಿಂದ ಸುವಿಚಾರ ಸ್ಥಿತಿಯು ಪ್ರಾಪ್ತವಾಗುತ್ತದೆಯೋ ಮತ್ತು ಮೋಕ್ಷಮಾರ್ಗವು ತಿಳಿದುಬರುತ್ತದೆಯೋ ಆ ವಿಷಯವನ್ನು ಇಲ್ಲಿ ಷಟ್‌ಪದರೂಪದಿಂದ ಗುರುಶಿಷ್ಯರ ಸಂವಾದಕ್ರಮದಲ್ಲಿ ಹೇಳುತ್ತೇನೆ.

## ಷಟ್ಪದ ನಾಮಕಥನ :-

"ಆತ್ಮಾ ಛೇ" "ತೇ ನಿತ್ಯ ಛೇ", "ಛೇ ಕರ್ತಾ ನಿಜ್‌ಕರ್ಮ್";
"ಛೇ ಭೋಕ್ತಾ" ವಳೀ "ಮೋಕ್ಷ ಛೇ", "ಮೋಕ್ಷ್ ಉಪಾಯ್ ಸುಧರ್ಮ್" ॥43॥

"ಆತ್ಮನು ಇದ್ದಾನೆ.'' "ಆ ಆತ್ಮನು ನಿತ್ಯವಾಗಿದ್ದಾನೆ.' "ಆತ್ಮನು ತನ್ನ ಕರ್ಮದ ಕರ್ತೃವಾಗಿದ್ದಾನೆ'. "ಅವನು ಕರ್ಮದ ಭೋಕ್ತೃವಾಗಿದ್ದಾನೆ'. "ಅವನಿಗೆ ಕರ್ಮದಿಂದ ಮೋಕ್ಷವಾಗುತ್ತದೆ'. "ಆ ಮೋಕ್ಷದ ಉಪಾಯವಾದ ಸದ್ಧರ್ಮವಿದೆ'.

**ಪರಮ್ ಬುದ್ಧಿ ಕೃಶ್ ದೇಹ್ ಮಾಂ, ಸ್ಥೂಳ್ ದೇಹ್ ಮತಿ ಅಲ್ಪ್ ।**
**ದೇಹ್ ಹೋಯ್ ಜೋ ಆತ್ಮಾ, ಘಟೇ ನ ಆಮ್ ವಿಕಲ್ಪ್ ॥56॥**

ಕೃಶ ದೇಹದಲ್ಲಿ ಪರಮ ಬುದ್ಧಿಯೂ ಸ್ಥೂಲ ದೇಹದಲ್ಲಿ ಅಲ್ಪ ಬುದ್ಧಿಯೂ ಇರುವುದು ಕಂಡು ಬರುತ್ತದೆ. ದೇಹವೇ ಆತ್ಮನಾಗಿದ್ದರೆ ಈ ವಿಕಲ್ಪ - ಅಂದರೆ ವಿರೋಧವಿರಲು ಅವಕಾಶವಾಗುತ್ತಿರಲಿಲ್ಲ.

**ಜಡ್ ಚೇತ್‌ನನೋ ಭಿನ್ನ ಛೇ, ಕೇವಳ್ ಪ್ರಗಟ್ ಸ್ವಭಾವ್ ।**
**ಏಕ್‌ಪಣುಂ ಪಾಮೇ ನಹೀ, ತ್ರಣೇ ಕಾಳ್ ದ್ವಯ್ ಭಾವ್ । ॥57॥**

ಯಾವ ಕಾಲದಲ್ಲಿ ಯಾವುದರಲ್ಲಿ ತಿಳಿಯುವ ಸ್ವಭಾವವು ಇಲ್ಲವೋ ಅದು ಜಡ. ಸದಾ ತಿಳಿಯುವ ಸ್ವಭಾವವುಳ್ಳದ್ದೋ ಅದು ಚೇತನ. ಈ ಪ್ರಕಾರ ಜಡ ಮತ್ತು ಚೇತನ ಈ ಎರಡರ ಸ್ವಭಾವವು ಭಿನ್ನಭಿನ್ನವಾಗಿದೆ. ಇವೆರಡೂ ಯಾವ ಪ್ರಕಾರದಿಂದಲೂ ಒಂದೇ ಆಗುವುದಕ್ಕೆ ಯೋಗ್ಯವಲ್ಲ. ಮೂರುಕಾಲದಲ್ಲಿಯೂ ಜಡವು ಜಡರೂಪದಲ್ಲಿಯೂ ಚೇತನವು ಚೇತನರೂಪದಲ್ಲಿಯೂ ಇರುತ್ತವೆಂಬ ಇವೆರಡರ ಭಿನ್ನ ಭಿನ್ನ ದ್ವೈತಭಾವವು ಸ್ಪಷ್ಟ ಅನುಭವಕ್ಕೆ ಬರುತ್ತದೆ.

**ಆತ್ಮಾನೀ ಶಂಕಾ ಕರೇ, ಆತ್ಮಾ ಪೋತೇ ಆಪ್ ।**
**ಶಂಕಾನೋ ಕರ್‌ನಾರ್ ತೇ, ಅಚ್‌ರಜ್ ಏಹ್ ಅಮಾಪ್ ॥58॥**

ಆತ್ಮನು ಸ್ವಂತ ಆತ್ಮನ ವಿಷಯದಲ್ಲಿ ತಾನೇ ಸಂಶಯವನ್ನು ಮಾಡುತ್ತಾನೆ. ಯಾರು ಸಂಶಯವನ್ನು ಮಾಡುತ್ತಾನೋ ಅವನೇ ಆತ್ಮನು. ಇದನ್ನು ತಿಳಿಯುತ್ತ ಇಲ್ಲ. ಇದು ಅಪರಿಮಿತ ಆಶ್ಚರ್ಯವಾಗಿದೆ.

## ಸಂದೇಹ : ಶಿಷ್ಯನು ಕೇಳಿದ್ದು :-

**ಆತ್ಮಾನಾ ಅಸ್ತಿತ್ವನಾ, ಆಪೇ ಕಹ್ಯಾ ಪ್ರಕಾರ್ ।**
**ಸಂಭವ್ ತೇನೋ ಥಾಯ್ ಛೇ, ಅಂತರ್ ಕರ್ಯೇ ವಿಚಾರ್ ॥59॥**

ಆತ್ಮನ ಅಸ್ತಿತ್ವದ ವಿಷಯದಲ್ಲಿ ತಾವು ಯಾವ ಯಾವ ಯುಕ್ತಿ ಮಾತುಗಳನ್ನು ಹೇಳಿದಿರೋ ಅವುಗಳನ್ನು ಅಂತರಂಗದಲ್ಲಿ ವಿಚಾರ ಮಾಡುವುದರಿಂದ ಅವನ ಅಸ್ತಿತ್ವವು ಸಂಭವನೀಯವಾಗುತ್ತದೆ.

**ಬೀಜೀ ಶಂಕಾ ಥಾಯ್ ತ್ಯಾಂ, ಆತ್ಮಾ ನಹೀ ಅವಿನಾಶ್ ।**
**ದೇಹ್ ಯೋಗ್‌ಥೀ ಊಪ್‌ಜೇ, ದೇಹ್ ವಿಯೋಗೇ ನಾಶ್ ॥60॥**

ಆದರೆ ಇನ್ನೊಂದು ಸಂಶಯವು ಉಂಟಾಗುತ್ತದೆ. "ಆತ್ಮನು ಇದ್ದಾನೆ" ಆದರೆ ಅವನು ಅವಿನಾಶಿ ಅಂದರೆ ನಿತ್ಯನಲ್ಲ. ಅಂದರೆ ಮೂರೂ ಕಾಲಗಳಲ್ಲಿ ಇರುವ ಪದಾರ್ಥ(ವಸ್ತು)ವಲ್ಲ. ಅವನು ಕೇವಲ ದೇಹಸಂಯೋಗದಿಂದ ಉತ್ಪನ್ನನಾಗುತ್ತಾನೆ. ಮತ್ತು ಅದರ ವಿಯೋಗದಿಂದ ನಾಶವಾಗುತ್ತಾನೆ.

**ಅಥವಾ ವಸ್ತು ಕ್ಷಣಿಕ್ ಛೇ, ಕ್ಷಣೇ, ಕ್ಷಣೇ ಪಲ್‌ಟಾಯ್ ।**
**ಏ ಅನುಭವ್‌ಥೀ ಪಣ್ ನಹೀ, ಆತ್ಮಾ ನಿತ್ಯ್ ಜಣಾಯ್ ॥61॥**

ಥವಾ ವಸ್ತುವು ಕ್ಷಣ-ಕ್ಷಣಕ್ಕೂ ಬದಲಾಗುತ್ತಿರುವುದನ್ನು ಕಾಣುವುದರಿಂದ ಎಲ್ಲಾ ವಸ್ತುಗಳೂ ಕ್ಷಣಿಕವಾಗಿವೆ. ಮತ್ತು ಅನುಭವದಿಂದ ೋಡಿದರೂ ಕೂಡ ಆತ್ಮನು ನಿತ್ಯನೆಂದು ಕಂಡು ಬರವುದಿಲ್ಲ.

## ಸದ್ಗುರು ಹೇಳಿದ್ದು :-

**ದೇಹ್ ಮಾತ್ರ್ ಸಂಯೋಗ್ ಛೇ, ವಳೀ ಜಡ್ ರೂಪೀ ದೃಶ್ಯ್ ।**
**ಚೇತನ್‌ನಾಂ ಉತ್ಪತ್ತಿ ಲಯ್, ಕೋನಾ ಅನುಭವ್ ವಶ್ಯ್ ? ॥62॥**

ದೇಹವು ಪರಮಾಣುಗಳ ಸಂಯೋಗ ಮಾತ್ರವಾಗಿದೆ ಅಥವಾ ಸಂಯೋಗದಿಂದ ಆತ್ಮನ ಸಂಬಂಧದಲ್ಲಿದೆ. ಮತ್ತು ದೇಹವು ಜಡವಾಗಿದೆ. ರೂಪುಳ್ಳದ್ದಾಗಿದೆ ಮತ್ತು ದೃಶ್ಯ ಅಂದರೆ ಬೇರೆಯವರಿಗೆ ಕಾಣುವಂತಹದಾಗಿದೆ. ಅಂದರೆ ಅದು ತನ್ನನ್ನು ತಾನು ತಿಳಿದುಕೊಳ್ಳದಿರುವುದರಿಂದ ಚೇತನದ ಉತ್ಪತ್ತಿ ಹಾಗೂ ನಾಶವನ್ನು ಹೇಗೆ ತಿಳಿದುಕೊಳ್ಳಲು ಸಾಧ್ಯ ? ಈ ದೇಹದ ಒಂದೊಂದು ಪರಮಾಣುವನ್ನು ನಿರೀಕ್ಷಿಸಿದರೂ ಅದು ಜಡವಾಗಿದೆ ಎಂದು ಕಂಡು ಬರುತ್ತದೆ. ಆದ್ದರಿಂದ ಆ ದೇಹದಿಂದ ಚೇತನದ ಉತ್ಪತ್ತಿಯಾಗಲಾರದು ಮತ್ತು ಯಾವುದರಿಂದ ಚೇತನದ ಉತ್ಪತ್ತಿಯಾಗಲಾರದೋ ಆ ದೇಹದಲ್ಲಿ ಚೇತನದ ನಾಶವೂ ಆಗಲಾರದು. ಅಲ್ಲದೆ ಆ ದೇಹವು ರೂಪೀ ಅಂದರೆ ಸ್ಥೂಲಾದಿ ಪರಿಣಾಮವುಳ್ಳದ್ದು; ಮತ್ತು ಚೇತನವು ದ್ರಷ್ಟಾ ಆಗಿದೆ. ಆದ್ದರಿಂದ ದೇಹದ ಸಂಯೋಗದಿಂದ ಚೇತನದ ಉತ್ಪತ್ತಿಯು ಹೇಗಾದೀತು ? ಮತ್ತು ಅದರಲ್ಲಿ ಚೇತನದ ಲಯ(ನಾಶ)ವಾದರೂ ಹೇಗಾದೀತು ? ದೇಹದಲ್ಲಿಯೇ ಚೇತನದ ಉತ್ಪತ್ತಿಯು ಆಗುತ್ತದೆ ಮತ್ತು ಅದರಲ್ಲಿಯೇ ಚೇತನದ ಲಯ(ನಾಶ)ವೂ ಆಗುತ್ತದೆ. ಈ ವಿಷಯವು ಯಾರ ಅನುಭವದ ಅಧೀನದಲ್ಲಿದೆ ? ಅಂದರೆ ಈ ಸಂಗತಿಯನ್ನು ಯಾರು ತಿಳಿದರು ? ಯಾಕೆಂದರೆ ತಿಳಿದುಕೊಳ್ಳುವ ಶಕ್ತಿಯುಳ್ಳ ಚೇತನದ ಉತ್ಪತ್ತಿಯು ದೇಹಕ್ಕಿಂತ ಮೊದಲು ಇಲ್ಲವೇ ಇಲ್ಲ ಮತ್ತು ನಾಶವಂತೂ ಅದಕ್ಕಿಂತ ಮೊದಲೇ ಆಗುತ್ತದೆ. ಅಂದಮೇಲೆ ಈ ಅನುಭವವು ಯಾರಿಗೆ ಆಯಿತು ?

**ಜೇನಾ ಅನುಭವ್ ವಶ್ಯ್ ಏ, ಉತ್ಪನ್ನ ಲಯ್‌ನುಂ ಜ್ಞಾನ್ ।**
**ತೇ ತೇಥೀ ಜುದಾ ವಿನಾ, ಥಾಯ್ ನ ಕೇಮೇ ಭಾನ್ ॥63॥**

ದೇಹದ ಉತ್ಪತ್ತಿ ಮತ್ತು ನಾಶದ ಜ್ಞಾನವು ಯಾವುದರ ಅನುಭವದಲ್ಲಿ ನಿಲ್ಲುತ್ತದೆಯೋ ಅದು ಈ ದೇಹದಿಂದ ಭಿನ್ನವಾಗಿರದಿದ್ದಲ್ಲಿ ಯಾವ ವಿಧದಿಂದಲೂ ದೇಹದ ಉತ್ಪತ್ತಿ ಮತ್ತು ನಾಶದ ಜ್ಞಾನವು ಆಗುವುದಿಲ್ಲ. ಯಾವುದು ಯಾವುದರ ಉತ್ಪತ್ತಿ ಮತ್ತು ನಾಶವನ್ನು ತಿಳಿಯುತ್ತದೆಯೋ ಅದು ಅದರಿಂದ ಭಿನ್ನವೂ ಆಗಿರುತ್ತದೆ. ಅಲ್ಲದೆ ತಿರುಗಿ ಅದು ಸ್ವಂತ ಉತ್ಪತ್ತಿ ಹಾಗೂ ನಾಶವೆಂದು ನಿಶ್ಚಯವಾಗಲಿಲ್ಲ. ಆದರೆ ಅದನ್ನು ತಿಳಿಯುವಂಥದೆಂದು ಮಾತ್ರ ನಿಶ್ಚಯವಾಯಿತು. ಅಂದ ಮೇಲೆ ಪುನಃ ಅವೆರಡೂ ಒಂದೇ ಹೇಗೆ ಆಗುತ್ತವೆ ?

**ಜೇ ಸಂಯೋಗೋ ದೇಖಿಯೇ, ತೇ ತೇ ಅನುಭವ್ ದೃಶ್ಯ್ ।**
**ಊಪ್‌ಜೇ ನಹಿ ಸಂಯೋಗ್‌ಥೀ, ಆತ್ಮಾ ನಿತ್ಯ್ ಪ್ರತ್ಯಕ್ಷ್ ॥64॥**

ಯಾವ ಯಾವ ಸಂಯೋಗಗಳನ್ನು ನಾವು ಕಾಣುತ್ತೇವೆಯೋ ಅವು ಅನುಭವಸ್ವರೂಪನಾದ ಆತ್ಮನ ದೃಶ್ಯಗಳಾಗಿವೆ. ಅಂದರೆ ಆತ್ಮನು ಅವುಗಳನ್ನು ತಿಳಿದುಕೊಳ್ಳುತ್ತಾನೆ. ಈ ಸಂಯೋಗಗಳ ಸ್ವರೂಪವನ್ನು ವಿಚಾರಿಸಿದರೆ ಅವುಗಳಲ್ಲಿ ಆತ್ಮನನ್ನೂ ಉತ್ಪನ್ನ ಮಾಡುವ ಒಂದು ಸಂಯೋಗವು ಕಂಡು ಬರುವುದಿಲ್ಲ. ಆದ್ದರಿಂದ ಆತ್ಮನು ಸಂಯೋಗದಿಂದ ಹುಟ್ಟಿದವನಲ್ಲ. ಅರ್ಥಾತ್ ಆತ್ಮನು ಅಸಂಯೋಗಿಯಾಗಿದ್ದಾನೆ. ಸ್ವಾಭಾವಿಕ ಪದಾರ್ಥವಾಗಿದ್ದಾನೆ. ಆದ್ದರಿಂದ ಅವನು ಪ್ರತ್ಯಕ್ಷ ನಿತ್ಯವೆಂದು ತಿಳಿದುಬರುತ್ತದೆ.

**ಜಡ್‌ಥೀ ಚೇತನ್ ಊಪಜೇ, ಚೇತನ್‌ಥೀ ಜಡ್ ಥಾಯ್ ।**
**ಏವೋ ಅನುಭವ್ ಕೋಈನೇ, ಕ್ಯಾರೇ ಕದೀ ನ ಥಾಯ್ ॥65॥**

ಜಡದಿಂದ ಚೇತನವು ಉತ್ಪತ್ತಿಯಾಗುತ್ತದೆ ಮತ್ತು ಚೇತನದಿಂದ ಜಡವು ಉತ್ಪನ್ನವಾಗುತ್ತದೆ ಹೀಗೆ ಯಾರಿಗೂ ಯಾವ ಕಾಲದಲ್ಲೂ ಅನುಭವವಾಗುವುದಿಲ್ಲ.

**ಕೋಈ ಸಂಯೋಗೋಥೀ ನಹೀ, ಜೇನೀ ಉತ್ಪತ್ತಿ ಥಾಯ್ ।**
**ನಾಶ್ ನ ತೇನೋ ಕೋಈಮಾಂ, ತೇಥೀ ನಿತ್ಯ್ ಸದಾಯ್ ॥66॥**

ಯಾವುದರ ಉತ್ಪತ್ತಿಯು ಯಾವ ಸಂಯೋಗದಿಂದಲೂ ಆಗುವುದಿಲ್ಲವೋ ಅದರ ಲಯ(ನಾಶ)ವೂ ಯಾವುದರಲ್ಲಿಯೂ ಆಗುವುದಿಲ್ಲ. ಆದ್ದರಿಂದ ಆತ್ಮನು ತ್ರಿಕಾಲ "ನಿತ್ಯ" ನಾಗಿದ್ದಾನೆ.

ಕ್ರೋಧಾದಿ ತರ್‌ತಮ್ಯತಾ, ಸರ್ಪಾದಿಕನೀ ಮಾಂಯ್ ।
ಪೂರ್ವಜನ್ಮ್ ಸಂಸ್ಕಾರ್ ತೆ, ಜೀವ್ ನಿತ್ಯತಾ ತ್ಯಾಂಯ್ ॥67॥

ಹಾವು ಮೊದಲಾದ ಪ್ರಾಣಿಗಳಲ್ಲಿ ಕ್ರೋಧ ಮೊದಲಾದ ಪ್ರಕೃತಿಗಳ ವಿಶೇಷತೆಯು ಜನ್ಮತಃ ಕಾಣಲಾಗುತ್ತದೆ. ಈ ಗುಣಗಳ ಅಭ್ಯಾಸವನ್ನು ಆ ಪ್ರಾಣಿಗಳು ಈ ವರ್ತಮಾನಕಾಲದ ದೇಹದಲ್ಲಿ ಮಾಡಿರುವುದಿಲ್ಲ. ಆದರೂ ಆ ಗುಣಗಳು ಅವುಗಳಿಗೆ ಜನ್ಮದೊಡನೆ ಬಂದಿರುತ್ತವೆ. ಇದು ಪೂರ್ವಜನ್ಮದ ಸಂಸ್ಕಾರವಾಗಿದೆ. ಈ ಪೂರ್ವಜನ್ಮವು ಜೀವನ ನಿತ್ಯತೆಯನ್ನು ಸಿದ್ಧಮಾಡುತ್ತದೆ.

ಆತ್ಮಾ ದ್ರವ್ಯೇ ನಿತ್ಯ ಛೇ, ಪರ್ಯಾಯೇ ಪಲ್‌ಟಾಯ್ ।
ಬಾಳಾದಿ ವಯ್ ತ್ರಣ್ಯನುಂ, ಜ್ಞಾನ್ ಏಕ್‌ನೇ ಥಾಯ್ ॥68॥

ಆತ್ಮನು ವಸ್ತುರೂಪದಿಂದ ನಿತ್ಯನಾಗಿದ್ದಾನೆ. ಆದರೆ ಪ್ರತಿಸಮಯದಲ್ಲಿಯೂ ಜ್ಞಾನಾದಿ ಪರಿಣಾಮಗಳು ಬದಲಾಗುವುದರಿಂದ ಅವನ ಪರ್ಯಾಯದಲ್ಲಿಯೂ ಪರಿವರ್ತನವು ಉಂಟಾಗುತ್ತದೆ. ಹೇಗೆಂದರೆ ಸಮುದ್ರದಲ್ಲಿ ಪರಿವರ್ತನೆಯು ಆಗುವುದಿಲ್ಲ. ಆದರೆ ಕೇವಲ ತೆರೆಗಳಲ್ಲಿ ವ್ಯತ್ಯಾಸವಾಗುತ್ತದೆ. ಅದರಂತೆ ಉದಾಹರಣೆಗಾಗಿ ಈ ರೀತಿ ಹೇಳಬಹುದು. ಬಾಲ, ಯುವಾ, ವೃದ್ಧಗಳೆಂದಿರುವ ಮೂರು ಅವಸ್ಥೆಗಳು ಆತ್ಮನ ವಿಭಾವ ಪರ್ಯಾಯಗಳಾಗಿವೆ. ಬಾಲ್ಯಾವಸ್ಥೆಯಲ್ಲಿರುವಾಗ ಆತ್ಮನು ಬಾಲಕನೆನಿಸುತ್ತಾನೆ. ಆ ಬಾಲ್ಯಾವಸ್ಥೆಯನ್ನು ಬಿಟ್ಟು ಯಾವಾಗ ಆತ್ಮನು ಯುವಾವಸ್ಥೆಯನ್ನು ಧರಿಸುತ್ತಾನೋ ಆಗ ಯುವಕನೆನಿಸುತ್ತಾನೆ. ಇನ್ನು ಯುವಾವಸ್ಥೆಯನ್ನು ಯಾವಾಗ ಬಿಟ್ಟು ವೃದ್ಧಾವಸ್ಥೆಯನ್ನು ಧರಿಸುವನೋ ಆ ಕಾಲಕ್ಕೆ ಅವನು ವೃದ್ಧನೆನಿಸುತ್ತಾನೆ. ಈ ಮೂರು ಅವಸ್ಥೆಗಳಲ್ಲಿರುವ ಭೇದಗಳು ಪರ್ಯಾಯದ ಭೇದಗಳೇ ಆಗಿವೆ. ಆದರೆ ಈ ಮೂರೂ ಅವಸ್ಥೆಗಳಲ್ಲಿ ಆತ್ಮದ್ರವ್ಯದಲ್ಲಿ ಭೇದವು ಉಂಟಾಗುವುದಿಲ್ಲ. ಆತ್ಮನ ನಿಜ ಪರಿವರ್ತನೆಯು ಇಲ್ಲ. ಆತ್ಮನು ಈ ಮೂರೂ ಅವಸ್ಥೆಗಳನ್ನು ತಿಳಿಯುತ್ತಾನೆ. ಅಲ್ಲದೆ ಅವನಿಗೇ ಈ ಮೂರೂ ಅವಸ್ಥೆಗಳ ಸ್ಮೃತಿಯೂ ಇರುತ್ತದೆ. ಆದ್ದರಿಂದ ಮೂರೂ ಅವಸ್ಥೆಗಳಲ್ಲಿ ಒಂದೇ ಆತ್ಮನು ಇದ್ದ ಮೇಲೆಯೇ ಹೀಗಿರುವ ಸಂಭವವಿದೆ. ಆತ್ಮನು ಕ್ಷಣಕ್ಷಣಕ್ಕೂ ಬದಲಾಗುತ್ತಿದ್ದರೆ ಹೀಗೆ ಅನುಭವವಾಗುವುದು ಎಂದೂ ಸಾಧ್ಯವಿದ್ದಿಲ್ಲ.

ಅಥವಾ ಜ್ಞಾನ್ ಕ್ಷಣಿಕ್‌ನುಂ, ಜೇ ಜಾಣೀ ವದ್‌ನಾರ್ ।
ವದ್‌ನಾರೋ ತೇ ಕ್ಷಣಿಕ್ ನಹೀ, ಕರ್ ಅನುಭವ್ ನಿರ್ಧಾರ್ ॥69॥

ಹಾಗೆಯೇ ಒಂದು ಪದಾರ್ಥವು ಕ್ಷಣಿಕವಿದೆಯೆಂದು ಯಾರು ತಿಳಿಯುತ್ತಾರೋ ಮತ್ತು ಕ್ಷಣಿಕತ್ವವನ್ನು ಹೇಳುತ್ತಾರೋ ಹಾಗೆ ಹೇಳುವವರು ಅಂದರೆ ತಿಳಿಯುವವರು ಕ್ಷಣಿಕರಾಗಿರುವುದಿಲ್ಲ. ಯಾಕೆಂದರೆ ಪ್ರಥಮ ಕ್ಷಣದಲ್ಲಿ ಯಾರಿಗೆ ಅನುಭವ ಆಗಿದೆಯೋ ಅವನಿಗೇನೇ ಎರಡನೇ ಕ್ಷಣದಲ್ಲಿ ಆ ಅನುಭವವವಾಯ್ತೆಂದು ಹೇಳಲು ಸಾಧ್ಯ. ಆ ಎರಡನೆಯ ಕ್ಷಣದಲ್ಲಿ ಸ್ವಯಂ ತಾನು ಇರದಿದ್ದರೆ ಎಲ್ಲಿಂದ ಹೇಳುತ್ತಾನೆ ? ಆದ್ದರಿಂದ ಈ ಅನುಭವದಿಂದಲೂ ಆತ್ಮನ ಅಕ್ಷಣಿಕತ್ವವನ್ನು ನಿಶ್ಚಯಿಸು.

ಕ್ಯಾರೇ ಕೋಈ ವಸ್ತುನೋ, ಕೇವಳ್ ಹೋಯ್ ನ ನಾಶ್ ।
ಚೇತನ್ ಪಾಮೇ ನಾಶ್ ತೋ, ಕೇಮಾಂ ಭಳೇ ತಪಾಸ್ ॥70॥

ಯಾವ ವಸ್ತುವೂ ಯಾವ ಕಾಲದಲ್ಲಿಯೂ ಸಂಪೂರ್ಣ ನಾಶ ಹೊಂದುವುದಿಲ್ಲ. ಕೇವಲ ರೂಪಾಂತರವನ್ನು ಹೊಂದುತ್ತದೆ. ಆದ್ದರಿಂದ ಚೇತನವೂ ಸಹ ಸಂಪೂರ್ಣ ನಾಶವಾಗುವುದಿಲ್ಲ ಮತ್ತು ಅವಸ್ಥಾಂತರ ರೂಪವಾದ ನಾಶವನ್ನು ಹೊಂದುತ್ತಿದ್ದರೆ ಅದು ಯಾವುದರಲ್ಲಿ ಕೂಡಿಕೊಂಡು ಹೋಗುತ್ತದೆ ?

## ಸಂದೇಹ : ಶಿಷ್ಯನು ಕೇಳಿದ್ದು :-

ಕರ್ತಾ ಜೀವ್ ನ ಕರ್ಮನೋ, ಕರ್ಮ್ ಜ ಕರ್ತಾ ಕರ್ಮ್ ।
ಅಥವಾ ಸಹಸ್ ಸ್ವಭಾವ್ ಕಾಂ, ಕರ್ಮ್ ಜೀವ್‌ನೋ ಧರ್ಮ್ ॥71॥

ಜೀವ ಕರ್ಮದ ಕರ್ತೃವಲ್ಲ. ಕರ್ಮವೇ ಕರ್ಮದ ಕರ್ತೃವಾಗಿದೆ ಅಥವಾ ಕರ್ಮವು ಅನಾಯಾಸವಾಗಿ (ಪ್ರಯತ್ನವಿಲ್ಲದೆ) ಆಗುತ್ತಿರುತ್ತದೆ. ಹೀಗಲ್ಲ. ಜೀವವೇ ಕರ್ಮದ ಕರ್ತೃವೆಂದು ಹೇಳುವುದಾದರೆ ಆದೂ ಜೀವನ ಧರ್ಮವೇ ಆಗುವುದು. ಅರ್ಥಾತ್ ಧರ್ಮವಾದ್ದರಿಂದ ಅದು (ಕರ್ಮ) ಎಂದಿಗೂ ನಿವೃತ್ತಿಯಾಗಲಾರದು.

ಆತ್ಮಾ ಸದಾ ಅಸಂಗ್ ನೇ, ಕರೇ ಪ್ರಕೃತಿ ಬಂಧ್ ।
ಅಥವಾ ಈಶ್ವರ್ ಪ್ರೇರಣಾ, ತೇಥೀ ಜೀವ್ ಅಬಂಧ್ ॥72॥

ಹೀಗಲ್ಲದಿದ್ದರೆ ಆತ್ಮನು ಸದಾ ಅಸಂಗನಾಗಿದ್ದಾನೆ ಮತ್ತು ಸತ್ವಾದಿ ಗುಣಯುಕ್ತ ಪ್ರಕೃತಿಯು ಕರ್ಮದ ಬಂಧವನ್ನು ಮಾಡುತ್ತದೆ. ಹಾಗಲ್ಲದಿದ್ದರೆ ಜೀವನಿಗೆ ಕರ್ಮವನ್ನು ಮಾಡುವ ಪ್ರೇರಣೆಯನ್ನು ಈಶ್ವರ ಮಾಡುತ್ತಾನೆ. ಹೀಗೆ ಈಶ್ವರೇಚ್ಛಾಧೀನನಾದುದರಿಂದ ಜೀವನು ಆ ಕರ್ಮಗಳಿಂದ "ಅಬಂಧ' ನಾಗಿದ್ದಾನೆ.

ಮಾಟೇ ಮೋಕ್ಷ್ ಉಪಾಯ್‌ನೋ, ಕೋಈ ನ ಹೇತು ಜಣಾಯ್ ।
ಕರ್ಮ್‌ತಣುಂ ಕರ್ತಾಪಣುಂ, ಕಾಂ ನಹಿ ಕಾಂ, ನಹಿ ಜಾಯ್ ॥73॥

ಆದ್ದರಿಂದ ಜೀವನು ಯಾವ ಪ್ರಕಾರದಿಂದಲೂ ಕರ್ಮದ ಕರ್ತೃವಾಗಲು ಸಾಧ್ಯವಿಲ್ಲ ಮತ್ತು ಮೋಕ್ಷದ ಉಪಾಯವನ್ನು ಮಾಡಲು ಯಾವ ಕಾರಣವೂ ಕಂಡುಬರುವುದಿಲ್ಲ. ಆದ್ದರಿಂದ ಜೀವನಿಗೆ ಕರ್ಮದ ಕರ್ತೃತ್ವವಿದ್ದರೆ ಅದರ ಸ್ವಭಾವವನ್ನು ಯಾವ ರೀತಿಯಿಂದಲೂ ನಾಶ ಮಾಡಲು ಆಗುವುದಿಲ್ಲ.

## ಸಮಾಧಾನ : ಸದ್ಗುರು ಹೇಳಿದ್ದು :-

ಹೋಯ್ ನ ಚೇತನ್ ಪ್ರೇರಣಾ, ಕೋಣ್ ಗ್ರಹೇ ತೋ ಕರ್ಮ್।
ಜಡ್ ಸ್ವಭಾವ್ ನಹಿ ಪ್ರೇರ್‌ಣಾ, ಜುಓ ವಿಚಾರೀ ಧರ್ಮ್ ॥74॥

ಚೇತನದಲ್ಲಿ (ಆತ್ಮನಲ್ಲಿ) ಪ್ರೇರಣಾ ರೂಪ ಪ್ರವೃತ್ತಿಯು ಇಲ್ಲದಿದ್ದರೆ ಕರ್ಮವನ್ನು ಗ್ರಹಣ ಮಾಡುವವನು ಯಾರು ? ಯಾಕೆಂದರೆ ಜಡದ ಸ್ವಭಾವವಂತೂ ಪ್ರೇರಣೆ ಮಾಡುವುದಲ್ಲ. ಜಡ ಮತ್ತು ಚೇತನ ಇವೆರಡರ ಧರ್ಮವನ್ನು ವಿಚಾರಮಾಡು.

ಜೋ ಚೇತನ್ ಕರ್‌ತುಂ ನಥೀ, ನಥೀ ಥತಾಂ ತೋ ಕರ್ಮ್ ।
ತೇಥೀ ಸಹಜ್ ಸ್ವಭಾವ್ ನಹಿ, ತೇಮ್ ಜ ನಹಿ ಜೀವ್‌ಧರ್ಮ್ ॥75॥

ಆತ್ಮನು ಕರ್ಮವನ್ನು ಮಾಡದೆ ಇದ್ದರೆ ಆ ಕರ್ಮವೇ ಆಗುತ್ತಿರಲಿಲ್ಲ. ಹೀಗೆ ಹೇಳುವುದರಿಂದ ಕರ್ಮವು ತನ್ನಿಂದ ತಾನೇ ತನ್ನ ಸ್ವಭಾವದಿಂದಲೇ ಅನಾಯಾಸವಾಗಿ - ಆಗುತ್ತದೆಂದು ಹೇಳುವುದೂ ಯೋಗ್ಯವಲ್ಲ. ಹಾಗೆಯೇ ಅದು ಜೀವನಧರ್ಮವೂ ಅಲ್ಲ. ಯಾಕೆಂದರೆ ಸ್ವಭಾವದ ನಾಶವಂತೂ ಆಗುವುದಿಲ್ಲ. ಹಾಗೆಯೇ ಆತ್ಮನು ಕರ್ಮವನ್ನು ಮಾಡದಿದ್ದರೆ ಕರ್ಮವೇ ಆಗುತ್ತಿರಲಿಲ್ಲ. ಅಂದರೆ ಈ ಭಾವ ಬಿಡುವುದಕ್ಕೆ ಸಾಧ್ಯ. ಆದ್ದರಿಂದ ಅದು (ಕರ್ಮಕರ್ತೃತ್ವ) ಆತ್ಮನ ಸ್ವಾಭಾವಿಕ ಧರ್ಮವಲ್ಲ.

ಕೇವಳ್ ಹೋತ್ ಅಸಂಗ್ ಜೋ, ಭಾಸತ್ ತನೇ ನ ಕೇಮ್ ?
ಅಸಂಗ್ ಛೇ ಪರಮಾರ್ಥ್‌ಥೀ, ಪಣ್ ನಿಜ್‌ಭಾನೇ ತೇಮ್ ॥76॥

ಆತ್ಮನು ಸರ್ವಥಾ ಅಸಂಗನಾಗಿದ್ದರೆ ಅರ್ಥಾತ್ ಅವನಿಗೆ ಎಂದೂ ಕರ್ಮದ ಕರ್ತೃತ್ವವು ಇಲ್ಲದಿದ್ದರೆ ನಿನಗೆ ಅವನು ಮೊದಲಿನಿಂದಲೂ ಯಾಕೆ ಭಾಸವಾಗದೆ ಇರುತ್ತಿದ್ದ ? ಅಂತೂ ಪರಮಾರ್ಥ ದೃಷ್ಟಿಯಿಂದ ಆತ್ಮನು ಅಸಂಗನೇ ಆದರೆ ತನ್ನ ಸ್ವರೂಪದ ಜ್ಞಾನವಾದಾಗ ಆ ಜ್ಞಾನ ಆಗುತ್ತೆ.

ಕರ್ತಾ ಈಶ್ವರ್ ಕೋಈ ನಹಿ, ಈಶ್ವರ್ ಶುದ್ಧ್ ಸ್ವಭಾವ್।
ಅಥವಾ ಪ್ರೇರಕ್ ತೇ ಗಣ್ಯೇ, ಈಶ್ವರ್ ದೋಷ್ ಪ್ರಭಾವ್ ॥77॥

ಜಗತ್ತಿನ ಅಥವಾ ಜೀವಗಳ ಕರ್ಮದ ಕರ್ತೃವು ಯಾವ ಈಶ್ವರನೂ ಅಲ್ಲ. ಯಾರಲ್ಲಿ ಶುದ್ಧ ಆತ್ಮ ಸ್ವಭಾವವು ಪ್ರಕಟವಾಗಿದೆಯೋ ಅವನೇ ಈಶ್ವರನು. ಆದ್ದರಿಂದ ಅವನನ್ನು - ಈಶ್ವರನನ್ನು ಕರ್ಮದ ಪ್ರೇರಕ ಅಂದರೆ ಕರ್ಮದ ಕರ್ತೃವೆಂದು ಅವನಿಗೂ ದೋಷದ ಪ್ರಭಾವವನ್ನು ಅಂಟಿಸಿದಂತಾಗುತ್ತದೆ. ಆದುದರಿಂದ ಜೀವನ ಕರ್ಮದ ಕರ್ತೃತ್ವದಲ್ಲಿಯೂ ಈಶ್ವರನ ಪ್ರೇರಣೆಯನ್ನು ಹೇಳಲಾಗುವುದಿಲ್ಲ.

ಚೇತನ್ ಜೋ ನಿಜ್ ಭಾನ್‌ಮಾಂ, ಕರ್ತಾ ಆಪ್ ಸ್ವಭಾವ್ ।
ವರ್ತೇ ನಹಿ ನಿಜ್‌ಭಾನ್‌ಮಾಂ, ಕರ್ತಾ ಕರ್ಮ್ ಪ್ರಭಾವ್ ॥78॥

ಆತ್ಮನು ಯಾವಾಗ ತನ್ನ ಶುದ್ಧ ಚೈತನ್ಯ ಮೊದಲಾದ ಸ್ವಭಾವದಲ್ಲಿ ಇರುವನೋ ಆಗ ಅವನು ತನ್ನ ಆ ಸ್ವಭಾವಗಳ ಕರ್ತೃಮಾತ್ರವಾಗಿದ್ದಾನೆ. ಅರ್ಥಾತ್ ಅವನು ಅದೇ ಸ್ವರೂಪದಲ್ಲಿ ಸ್ಥಿತನಾಗುತ್ತಾನೆ. ಯಾವಾಗ ಅವನ ಪರಿಶುದ್ಧ ಚೈತನ್ಯ ಮೊದಲಾದ ಸ್ವಭಾವಗಳು ಜಾಗ್ರತವಾಗಿರುವುದಿಲ್ಲವೋ ಆಗ ಅವನು ಕರ್ಮಭಾವದ ಕರ್ತೃವೆನಿಸುತ್ತಾನೆ.

## ಸಂದೇಹ : ಶಿಷ್ಯನು ಕೇಳಿದ್ದು :-

ಜೀವನು ಕರ್ಮದ ಭೋಕ್ತೃವಲ್ಲ ಎಂದು ಶಿಷ್ಯನು ಹೇಳುತ್ತಾನೆ.-

ಜೀವ್ ಕರ್ಮ್ ಕರ್ತಾ ಕಹೋ, ಪಣ್ ಭೋಕ್ತಾ ನಹಿ ಸೋಯ್ ।
ಶುಂ ಸಮ್‌ಜೇ ಜಡ್ ಕರ್ಮ್ ಕೇ, ಫಳ್ ಪರಿಣಾಮೀ ಹೋಯ್ ॥79॥

ಒಂದು ವೇಳೆ ಜೀವನು ಕರ್ಮದ ಕರ್ತೃವೆಂದು ಮನ್ನಿಸಿದರೂ ಆ ಜೀವನು ಕರ್ಮದ ಭೋಕ್ತೃ - ಆಗಲಾರನು. ಯಾಕೆಂದರೆ ಜಡ-ರೂಪದಲ್ಲಿರುವ ಕರ್ಮವು ತನ್ನಲ್ಲಿ ಫಲಕೊಡುವ ಶಕ್ತಿ ಇದೆ ಎಂದು ಏನು ತಿಳಿಯುತ್ತದೆಯೋ ? ಅಂದರೆ ಫಲದಾತ ಆಗುತ್ತದೆಯೋ ?

ಫಳ್‌ದಾತಾ ಈಶ್ವರ್ ಗಣ್ಯೇ, ಭೋಕ್ತಾಪಣುಂ ಸಧಾಯ್ ।
ಏಮ್ ಕಹ್ಯೇ ಈಶ್ವರ್‌ತಣುಂ, ಈಶ್ವರ್‌ಪಣುಂ ಜ ಜಾಯ್ ॥80॥

ಹಾಂ; ಒಂದು ವೇಳೆ ಫಲವನ್ನು ಕೊಡುವ ಈಶ್ವರನನ್ನು ಸ್ವೀಕರಿಸಿದರೆ ಭೋಕ್ತೃತ್ವವನ್ನು ಸಿದ್ಧಮಾಡಬಹುದು. ಅರ್ಥಾತ್ ಜೀವನಿಗೆ ಈಶ್ವರನು ಕರ್ಮವನ್ನು ಭೋಗಿಸಲು ನಿಯಮಿಸುವನೆಂದು ಸ್ವೀಕರಿಸಿದರೆ ಕರ್ಮದ ಭೋಕ್ತೃತ್ವವು ಸಿದ್ಧವಾಗುತ್ತದೆ. ಆದರೆ ಇದರಲ್ಲಿ ಇನ್ನೂ ಒಂದು ವಿರೋಧವು ಉಂಟಾಗುತ್ತದೆ. ಅದು ಯಾವುದೆಂದರೆ ಈಶ್ವರನಿಗೆ ಫಲ ಕೊಡುವುದೇ ಮೊದಲಾದ ಪ್ರವೃತ್ತಿಗಳಿವೆಯೆಂದರೆ ಅವನ ಈಶ್ವರತ್ವವೇ ನಷ್ಟವಾಗುತ್ತದೆ.

ಈಶ್ವರ್ ಸಿದ್ಧ ಥಯಾ ವಿನಾ, ಜಗತ್ ನಿಯಮ್ ನಹಿ ಹೋಯ್ ।
ಪಛೀ ಶುಭಾಶುಭ್ ಕರ್ಮ್‌ನಾಂ, ಭೋಗ್ಯ ಸ್ಥಾನ್ ನಹಿ ಕೋಯ್ ॥81॥

ಇಂಥ ಫಲ ಕೊಡುವಂಥ ಈಶ್ವರನು ಇದ್ದಾನೆಂದು ಸಿದ್ಧವಾಗುವುದಿಲ್ಲ. ಆದ್ದರಿಂದ ಜಗತ್ತಿನ ಯಾವ ನಿಯಮವೂ ಇಲ್ಲದಂತಾಗುತ್ತದೆ. ಅದೇ ರೀತಿ ಶುಭ ಅಶುಭ ಕರ್ಮಗಳನ್ನು ಭೋಗಿಸುವ ಸ್ಥಾನವೂ ಸಹ ಯಾವುದೂ ಉಳಿಯುವುದಿಲ್ಲ. ಅಂದ ಮೇಲೆ ಜೀವನಿಗೆ ಕರ್ಮದ ಭೋಕ್ತೃತ್ವವಾದರೂ ಎಲ್ಲಿ ಉಳಿಯುವುದು ?

## ಸಮಾಧಾನ : ಸದ್ಗುರು ಹೇಳಿದ್ದು :-

ಭಾವ್‌ಕರ್ಮ್ ನಿಜ್ ಕಲ್ಪನಾ, ಮಾಟೇ ಚೇತನ್ ರೂಪ್ ।
ಜೀವ್ ವೀರ್ಯನೀ ಸ್ಫುರ್‌ಣಾ, ಗ್ರಹಣ್ ಕರೇ ಜಡ್‌ಧೂಪ್ ॥82॥

ಜೀವನಿಗೆ ಭಾವ ಕರ್ಮವೆಂದು ತನ್ನದೆಂಬ ಭ್ರಾಂತಿ ಇದೆ. ಆದುದರಿಂದ ಅದನ್ನು ಚೈತನ್ಯರೂಪವೆಂದು ಮನ್ನಿಸುತ್ತಾ ಬರಲಾಗಿದೆ. ಅಲ್ಲದೆ ಆ ಭ್ರಾಂತಿಯನ್ನು ಅನುಸರಿಸಿಯೇ ಜೀವನ ವೀರ್ಯವು ಸ್ಫುರಿಸುತ್ತದೆ. ಅದರಿಂದಾಗಿ ಅವನು ಜಡ ದ್ರವ್ಯ ಕರ್ಮದ ವರ್ಗಣೆಗಳನ್ನು ಗ್ರಹಣ ಮಾಡುತ್ತಾನೆ.

ಝೇರ್ ಸುಧಾ ಸಮ್ ಜೇ ಸಹೀಂ, ಜೀವ್ ಖಾಯ್ ಫಳ್ ಥಾಯ್ ।
ಏಮ್ ಶುಭಾಶುಭ್ ಕರ್ಮ್‌ನುಂ, ಭೋಕ್ತಾಪಣುಂ ಜಣಾಯ್ ॥83॥

ವಿಷ ಹಾಗೂ ಅಮೃತಗಳು ತಾವು ಸ್ವತಃ ಜೀವಗಳಿಗೆ ಇಂಥ ಫಲವನ್ನು ಕೊಡುತ್ತೇವೆಂದು ತಿಳಿಯುವುದಿಲ್ಲ. ಆದರೂ ಅವುಗಳನ್ನು ಉಪಯೋಗಿಸಿದ ಜೀವನು ಅದರ ಫಲವನ್ನು ಅನುಭವಿಸುತ್ತಾನೆ. ಇದೇ ಪ್ರಕಾರ ಶುಭಾಶುಭ ಕರ್ಮಗಳು ತಾವು ಸ್ವತಃ ಜೀವಗಳಿಗೆ ಇಂಥ ಫಲಗಳನ್ನು ಕೊಡಬಲ್ಲೆವೆಂದು ತಿಳಿಯದಿದ್ದರೂ ಅವುಗಳನ್ನು ಗ್ರಹಣ ಮಾಡುವ ಜೀವನು ವಿಷ ಹಾಗೂ ಅಮೃತದ ಫಲಗಳನ್ನು ಅನುಭವಿಸುವಂತೆ ಕರ್ಮದ ಫಲಗಳನ್ನು ಹೊಂದುತ್ತಾನೆ.

ಏಕ್ ರಾಂಕ್ ನೇ ಏಕ್ ನೃಪ್, ಏ ಆದಿ ಜೇ ಭೇದ್ ।
ಕಾರಣ್ ವಿನಾ ನ ಕಾರ್ಯ್ ತೇ, ತೇ ಜ ಶುಭಾಶುಭ್ ವೇದ್ಯ್ ॥84॥

ಒಬ್ಬನು ಬಡವ, ಇನ್ನೊಬ್ಬನು ರಾಜ. ಈ ಪ್ರಕಾರ ನೀಚತೆ - ಉಚ್ಚತೆ - ಕುರೂಪತೆ- ಸುರೂಪತೆ ಮೊದಲಾದ ವಿಚಿತ್ರಗಳು ಕಂಡು ಬರುತ್ತವೆ. ಮತ್ತು ಈ ಪ್ರಕಾರದ ಭೇದಗಳು ಎಲ್ಲರಲ್ಲಿಯೂ ಸಮಾನವಾಗಿರುವುದಿಲ್ಲ. ಯಾಕೆಂದರೆ ಕಾರಣವಿಲ್ಲದೆ ಕಾರ್ಯದ ಉತ್ಪತ್ತಿ ಇಲ್ಲ. ಒಂದು ವೇಳೆ ಇದು ಶುಭ-ಅಶುಭ ಕರ್ಮಗಳ ಫಲವು ಆಗಿರದಿದ್ದರೆ ಒಬ್ಬ ರಾಜ, ಇನ್ನೊಬ್ಬ ಬಡವನಾಗಿರುವ ಈ ಭೇದಗಳು ಆಗಲು ಕಾರಣವಿರಲಿಲ್ಲ.

ಫಳ್‌ದಾತಾ ಈಶ್ವರ್ ತಣೀ, ಏಮಾಂ ನಥೀ ಜರೂರ್ ।
ಕರ್ಮ್ ಸ್ವಭಾವೇ ಪರಿಣ್‌ಮೇ, ಥಾಯ್ ಭೋಗ್ ಥೀ ದೂರ್ ॥85॥

ಫಲಕೊಡುವ ಈಶ್ವರನ ಅವಶ್ಯಕತೆಯು ಇದರಲ್ಲಿ ಏನೂ ಇಲ್ಲ. ವಿಷ ಹಾಗೂ ಅಮೃತದಂತೆ ಶುಭಾಶುಭ ಕರ್ಮಗಳ ಫಲಗಳೂ ಸಹ ಅವುಗಳ ಸ್ವಭಾವದಿಂದಲೇ ಉಂಟಾಗುತ್ತವೆ. ಯಾವ ಪ್ರಕಾರ ವಿಷ ಹಾಗೂ ಅಮೃತಗಳು ನಿಸ್ಸತ್ತ್ವ ಆದ ಮೇಲೆ ಫಲಕೊಡುವುದರಿಂದ ನಿವೃತ್ತವಾಗುತ್ತವೆಯೋ ಅದೇ ಪ್ರಕಾರ ಶುಭಾಶುಭ ಕರ್ಮಗಳನ್ನು ಭೋಗಿಸುವುದರಿಂದ ಅವುಗಳು ನಿಸ್ಸತ್ತ್ವವಾಗಿ ನಿವೃತ್ತಿಯನ್ನು ಹೊಂದುತ್ತವೆ.

ತೇ ತೇ ಭೋಗ್ಯ್ ವಿಶೇಷ್‌ನಾಂ, ಸ್ಥಾನಕ್ ದ್ರವ್ಯ ಸ್ವಭಾವ್ ।
ಗಹನ್ ವಾತ್ ಛೇ ಶಿಷ್ಯ್ ಆ, ಕಹೀ ಸಂಕ್ಷೇಪೇ ಸಾವ್ ॥86॥

ಉತ್ಕೃಷ್ಟ ಶುಭ ಅಧ್ಯವಸಾಯವು ಉತ್ಕೃಷ್ಟ ಶುಭಗತಿಯಾಗಿದೆ. ಉತ್ಕೃಷ್ಟ ಅಶುಭ ಅಧ್ಯವಸಾಯವು ಅಶುಭಗತಿಯಾಗಿದೆ. ಶುಭಾಶುಭ ಅಧ್ಯವಸಾಯವು ಮಿಶ್ರಗತಿಯಾಗಿದೆ. ಆಯಾ ಜೀವಗಳ ಪರಿಣಾಮವನ್ನೇ ಮುಖ್ಯವಾಗಿ ಗತಿಯೆಂದು ಹೇಳಲಾಗಿದೆ. ಉತ್ಕೃಷ್ಟ ಶುಭ ದ್ರವ್ಯದ ಊರ್ಧ್ವಗಮನ, ಉತ್ಕೃಷ್ಟ ಅಶುಭ ದ್ರವ್ಯದ ಅಧೋಗಮನ, ಶುಭ ಅಶುಭದ ಮಧ್ಯಸ್ಥಿತಿ ಈ ಪ್ರಕಾರ ದ್ರವ್ಯಗಳ ವಿಶೇಷ ಸ್ವಭಾವಗಳಾಗುತ್ತವೆ. ಆದ್ದರಿಂದ ಆಯಾ ಕಾರಣಗಳಿಂದ ಭೋಗ್ಯಸ್ಥಾನಗಳೂ ಆಗುವುದುಂಟು. ಎಲೈ ಶಿಷ್ಯನೇ! ಇದರಲ್ಲಿ ಜಡ ಚೈತನ್ಯಗಳ ಸ್ವಭಾವ, ಸಂಯೋಗ ಸೂಕ್ಷ್ಮಸ್ವರೂಪ ಅನೇಕ ವಿಚಾರಗಳು ಸಮಾವೇಶಗೊಳ್ಳುತ್ತವೆ. ಆದ್ದರಿಂದ ಈ ಮಾತುಗಳು ಗಹನವಾಗಿವೆ. ಆದರೂ ಇದನ್ನು ಅತ್ಯಂತ ಸಂಕ್ಷೇಪವಾಗಿ ಇಲ್ಲಿ ಹೇಳಲಾಗಿದೆ.

**ಸಂದೇಹ: ಶಿಷ್ಯನು ಕೇಳಿದ್ದು :-**

ಕರ್ತಾ ಭೋಕ್ತಾ ಜೀವ್ ಹೋ, ಪಣ್ ತೇನೋ ನಹೀಂ ಮೋಕ್ಷ್ ।
ವೀತ್ಯೋ ಕಾಳ್ ಅನಂತ್ ಪಣ್, ವರ್ತ್‌ಮಾನ್ ಛೇ ದೋಷ್ ॥87॥

ಜೀವನು ಕರ್ತಾ ಮತ್ತು ಭೋಕ್ತಾ - ಆಗಲಿ. ಆದರೆ ಅದರಿಂದ ಅವನಿಗೆ ಮೋಕ್ಷವಾಗುವುದಿಲ್ಲ. ಅನಂತ ಕಾಲ ಕಳೆದು ಹೋಗಿದೆ. ಆದರೂ ಇನ್ನೂ ಜೀವನಲ್ಲಿ ಕರ್ಮವನ್ನು ಮಾಡುವ ದೋಷವು ಇದ್ದೇ ಇದೆ.

ಶುಭ್ ಕರೇ ಫಳ್ ಭೋಗ್‌ವೇ, ದೇವಾದಿ ಗತಿಮಾಂಯ್ ।
ಅಶುಭ್ ಕರೇ ನರ್‌ಕಾದಿ ಫಳ್, ಕರ್ಮ್ ರಹಿತ್ ನ ಕ್ಯಾಂಯ್ ॥88॥

ಜೀವನು ಶುಭಕರ್ಮಗಳನ್ನು ಮಾಡಿದರೆ ಅದರಿಂದ ದೇವಾದಿಗತಿಗಳಾಗಿ ಅದರ ಶುಭ ಫಲಗಳನ್ನು ಭೋಗಿಸುತ್ತಾನೆ. ಅಶುಭ ಕರ್ಮಗಳನ್ನು ಮಾಡಿದರೆ ನರಕಾದಿಗತಿಗಳಲ್ಲಿ ಅಶುಭ ಫಲದ ಭೋಗವನ್ನು ಭೋಗಿಸುತ್ತಾನೆ. ಆದರೆ ಯಾವ ಸ್ಥಳದಲ್ಲಿಯೂ ಜೀವನು ಕರ್ಮರಹಿತನಾಗಿರುವುದಿಲ್ಲ.

## ಸಮಾಧಾನ : ಸದ್ಗುರು ಹೇಳಿದ್ದು :-

ಜೇಮ್ ಶುಭಾಶುಭ್ ಕರ್ಮ್‌ಪದ್, ಜಾಣ್ಯಾಂ ಸಫಳ್ ಪ್ರಮಾಣ್ ।
ತೇಮ್ ನಿವೃತ್ತಿ ಸಫಳ್‌ತಾ, ಮಾಟೇ ಮೋಕ್ಷ್ ಸುಜಾಣ್ ॥89॥

ಯಾವ ಪ್ರಕಾರ ನೀನು ಜೀವನನ್ನು ಶುಭಾಶುಭ ಕರ್ಮಮಾಡಲು ಕಾರಣನೆಂದೂ, ಜೀವನೇ ಕರ್ಮದ ಕರ್ತೃವೆಂದೂ ಕರ್ತೃವಾಗಿರುವುದರಿಂದ ಭೋಕ್ತೃವೆಂದೂ ತಿಳಿದಿರುವೆಯೋ ಹಾಗೆಯೇ ಅದನ್ನು ಮಾಡದಿರುವುದರಿಂದ ಅಥವಾ ಆ ಕರ್ಮದ ನಿವೃತ್ತಿಮಾಡುವುದರಿಂದ ಅದರ ನಿವೃತ್ತಿಯೂ ಆಗುವ ಸಂಭವವಿದೆ. ಆದ್ದರಿಂದ ಆ ನಿವೃತ್ತಿಯೂ ಕೂಡ ಸಫಲವಾಗಿದೆ. ಅಂದರೆ ಯಾವ ಪ್ರಕಾರ ಆ ಶುಭಾಶುಭ ಕರ್ಮಗಳ ನಿಷ್ಫಲವಾಗುವುದಿಲ್ಲವೋ ಅದೇ ಪ್ರಕಾರ ಅದರ ನಿವೃತ್ತಿಯೂ ಸಹ ನಿಷ್ಫಲವಾಗದು. ಆದರಿಂದ ಎಲೈ ಜಾಣನೇ ! ಈ ನಿವೃತ್ತಿರೂಪವೇ ಮೋಕ್ಷವಿದೆ ಎಂಬುದನ್ನು ನೀನು ವಿಚಾರಮಾಡು.

ವೀತ್ಯೋ ಕಾಳ್ ಅನಂತ್ ತೇ, ಕರ್ಮ್ ಶುಭಾಶುಭ್ ಭಾವ್ ।
ತೇಹ್ ಶುಭಾಶುಭ್ ಛೇದ್‌ತಾಂ, ಊಪ್‌ಜೇ ಮೋಕ್ಷ್ ಸ್ವಭಾವ್ ॥90॥

ಈ ಮೊದಲು ಕರ್ಮಸಹಿತ ಅನಂತ ಕಾಲ ಕಳೆಯಿತು. ಅದಕ್ಕೆ ಎಲ್ಲಾ ಶುಭಾಶುಭ ಕರ್ಮಗಳ ವಿಷಯದಲ್ಲಿ ಜೀವನ ಆಸಕ್ತಿ ಇರುವುದೇ ಕಾರಣವಾಗಿದೆ. ಆದರೆ ಕರ್ಮದ ಮೇಲೆ ಉದಾಸೀನನಾಗುವುದರಿಂದ ಕರ್ಮದ ಫಲವನ್ನು ಛೇದಿಸಲಿಕ್ಕೆ ಆಗುತ್ತದೆ. ಇದರಿಂದ ಮೋಕ್ಷ ಸ್ವಭಾವವು ಪ್ರಕಟವಾಗುತ್ತದೆ.

ದೇಹಾದಿಕ್ ಸಂಯೋಗ್‌ನೋ, ಆತ್ಯಂತಿಕ್ ವಿಯೋಗ್ ।
ಸಿದ್ಧ್ ಮೋಕ್ಷ್ ಶಾಶ್ವತ್ ಪದೇ, ನಿಜ್ ಅನಂತ್ ಸುಖ್‌ಭೋಗ್ ॥91॥

ದೇಹಾದಿಗಳ ಸಂಯೋಗದ ಅನುಕ್ರಮದಿಂದ ವಿಯೋಗವಂತೂ ಸದಾ ಆಗುತ್ತಿರುತ್ತದೆ. ಆದರೆ ಅದರ ವಿಯೋಗವು ತಿರುಗಿ ಅದು ಮತ್ತೊಮ್ಮೆ ಆಗದಂತೆ ಆಗಬೇಕು. ಅದೇ ಸಿದ್ಧ ಸ್ವರೂಪವಾಗಿದೆ. ಮೋಕ್ಷ ಸ್ವಭಾವದ ಪ್ರಕಟಸ್ಥಿತಿಯಾಗಿದೆ. ಆಗ ಶಾಶ್ವತ ಪದವನ್ನು ಹೊಂದಿ ಅನಂತ ಆತ್ಮಾನಂದವನ್ನು ಭೋಗಿಸಲು ಸಿಗುತ್ತದೆ.

## ಸಂದೇಹ : ಶಿಷ್ಯ ಕೇಳಿದ್ದು :-

ಹೋಯ್ ಕದಾಪಿ ಮೋಕ್ಷ್‌ಪದ್, ನಹಿ ಅವಿರೋಧ್ ಉಪಾಯ್ ।
ಕರ್ಮೋ ಕಾಳ್ ಅನಂತ್‌ನಾಂ, ಶಾಥೀ ಛೇದ್ಯಾಂ ಜಾಯ್ ? ॥92॥

ಒಂದು ವೇಳೆ ಮೋಕ್ಷ ಪದವಿ ಇದ್ದಿತು. ಆದರೆ ಅದನ್ನು ಪಡೆಯಲಿಕ್ಕೆ ಅವಿರೋಧಿಯಾದ ಉಪಾಯವು ಇದ್ದಂತೆ ತೋರುವುದಿಲ್ಲ. ಅದರ ಯಥಾತಥ್ಯಪ್ರತೀತಿಗೂ ಉಪಾಯವು ಗೊತ್ತಾಗುವುದಿಲ್ಲ. ಯಾಕೆಂದರೆ ಅನಂತ ಕಾಲದ ಕರ್ಮವನ್ನು ಈ ಮನುಷ್ಯ ಶರೀರದ ಅಲ್ಪ ಆಯುಷ್ಯದ ಅವಧಿಯಲ್ಲಿ ಹೇಗೆ ಛೇದಿಸುವುದು ಸಾಧ್ಯವಿದೆ ?

ಅಥವಾ ಮತ್‌ದರ್ಶನ್ ಘಣಾಂ, ಕಹೇ ಉಪಾಯ್ ಅನೇಕ್ ।
ತೇಮಾಂ ಮತ್ ಸಾಚೋ ಕಯೋ, ಬನೇ ನ ಏಹ್ ವಿವೇಕ್ ॥93॥

ಅಥವಾ ಮಾನವ ಶರೀರದ ಅಲ್ಪ ಆಯುಷ್ಯ ಇತ್ಯಾದಿ ಸಂಶಯಗಳನ್ನು ಬಿಟ್ಟರೂ ಸಹ ಸಂಸಾರದಲ್ಲಿ ಅನೇಕ ಮತಗಳು ದರ್ಶನಗಳು ಇವೆ. ಅವು ಮೋಕ್ಷಕ್ಕೆ ಅನೇಕ ಉಪಾಯಗಳನ್ನು ಹೇಳುತ್ತವೆ. ಒಬ್ಬರು ಒಂದು ಮಾರ್ಗವನ್ನು ಹೇಳಿದರೆ ಇನ್ನೊಬ್ಬರು ಇನ್ನೊಂದು ಮಾರ್ಗವನ್ನು ಹೇಳುತ್ತಾರೆ. ಇವುಗಳಲ್ಲಿ ಯಾವ ಮತ ಸತ್ಯ ಇದರ ನಿರ್ಣಯವಾಗುವುದೂ ಕಠಿಣ.

ಕಯೀ ಜಾತಿಮಾಂ ಮೋಕ್ಷ್ ಛೇ, ಕಯಾ ವೇಷ್‌ಮಾಂ ಮೋಕ್ಷ್ ।
ಏನೋ ನಿಶ್ಚಯ್ ನಾ ಬನೇ, ಘಣಾ ಭೇದ್ ಏ ದೋಷ್ ॥94॥

ಬ್ರಾಹ್ಮಣಾದಿ ಯಾವ ಜಾತಿಗಳಲ್ಲಿ ಮೋಕ್ಷವಿದೆ ಅಥವಾ ಯಾವ ವೇಷದಲ್ಲಿ ಮೋಕ್ಷವಿದೆ ಈ ವಿಷಯದ ನಿಶ್ಚಯವಾಗುವುದೂ ಕಠಿಣ. ಯಾಕೆಂದರೆ ಅವುಗಳಲ್ಲಿ ಅನೇಕ ಭೇದಗಳಿವೆ. ಈ ದೋಷದಿಂದಲೂ ಮೋಕ್ಷದ ಉಪಾಯವು ಪ್ರಾಪ್ತಿಯಾಗುವುದು ಕಂಡುಬರುವುದಿಲ್ಲ.

ತೇಥೀ ಏಮ್ ಜಣಾಯ್ ಛೇ, ಮಳೇ ನ ಮೋಕ್ಷ್ ಉಪಾಯ್ ।
ಜೀವಾದಿ ಜಾಣ್ಯಾ ತಣೋ, ಶೋ ಉಪ್‌ಕಾರ್ ಜ ಥಾಯ್ ? ॥95॥

ಇದರಿಂದ ಮೋಕ್ಷಕ್ಕೆ ಉಪಾಯವು ದೊರೆಯುವುದಿಲ್ಲ - ಎಂದು ಗೊತ್ತಾಗುತ್ತದೆ. ಆದ್ದರಿಂದ ಜೀವಾದಿಗಳ ಸ್ವರೂಪವನ್ನು ತಿಳಿಯುವುದರಿಂದ ಏನು ಉಪಕಾರವಾಗುವಂತಿದೆ ? ಅರ್ಥಾತ್ ಯಾವ ಮೋಕ್ಷ ಪದವನ್ನು ಹೊಂದುವುದಕ್ಕಾಗಿ ಇವುಗಳ ಜ್ಞಾನವು ಅವಶ್ಯವಾಗಿದೆಯೋ ಆ ಮೋಕ್ಷ ಪದದ ಉಪಾಯ ಹೊಂದುವುದಕ್ಕೆ ಅಶಕ್ಯವೆಂದು ಕಂಡುಬರುತ್ತದೆ.

ಪಾಂಚೇ ಉತ್ತರ್‌ಥೀ ಥಯುಂ, ಸಮಾಧಾನ್ ಸರ್ವಾಂಗ್,
ಸಮ್‌ಜುಂ ಮೋಕ್ಷ್ ಉಪಾಯ್ ತೋ, ಉದಯ್ ಉದಯ್ ಸದ್‌ಭಾಗ್ಯ್ ॥96॥

ನೀವು ಹೇಳಿದ ಐದು ಉತ್ತರಗಳಿಂದ ನನ್ನ ಸಂದೇಹಗಳು ಸರ್ವಾಂಗ ಪೂರ್ಣ ರೂಪದಿಂದ ಸಮಾಧಾನವಾಗಿವೆ. ಆದರೆ ಯಾವಾಗ ಮೋಕ್ಷದ ಉಪಾಯವನ್ನು ತಿಳಿದುಕೊಳ್ಳುವೆನೋ ಆಗ ನನ್ನ ಸದ್‌ಭಾಗ್ಯದ ಉದಯ -ಉದಯವಾಯಿತೆಂದು ತಿಳಿಯುತ್ತೇನೆ. (ಇಲ್ಲಿ ಉದಯ-ಉದಯ ಎಂದು ಬಹು ಸಲ ಹೇಳಿದೆ. ಮೇಲಿನ ಐದು ಉತ್ತರಗಳನ್ನು ಕೇಳಿ ಮೋಕ್ಷದ ಉಪಾಯವನ್ನು ತಿಳಿಯಲಿಕ್ಕೆ ಶಿಷ್ಯನು ಹೊಂದಿರುವ ಆತುರವನ್ನು ಈ ಪದಗಳು ತೋರಿಸುತ್ತವೆ.)

## ಸಮಾಧಾನ : ಸದ್ಗುರು ಹೇಳಿದ್ದು :-

ಮೋಕ್ಷದ ಉಪಾಯವಿದೆ ಎಂದು ಸದ್ಗುರುವು ಸಮಾಧಾವನ್ನು ಹೇಳುತ್ತಾನೆ.

ಪಾಂಚೇ ಉತ್ತರ್‌ನೀ ಥಈ, ಆತ್ಮಾ ವಿಷೇ ಪ್ರತೀತ್ ।
ಥಾಶೇ ಮೋಕ್ಷೋಪಾಯ್‌ನೀ, ಸಹಜ್ ಪ್ರತೀತ್ ಏ ರೀತ್ ॥97॥

ಯಾವ ಪ್ರಕಾರ ನಿನ್ನ ಆತ್ಮನಲ್ಲಿ ಐದು ಉತ್ತರಗಳ ಪ್ರತೀತಿಯು ಉಂಟಾಗಿರುವುದೋ ಅದೇ ಪ್ರಕಾರ ಮೋಕ್ಷದ ಉಪಾಯವೂ ಸಹ ಸಹಜವಾಗಿ ಪ್ರತೀತಿಯಾಗುತ್ತದೆ. ಇಲ್ಲಿ ಸದ್ಗುರುವು "ಸಹಜ" ಎಂದು ಹೇಳುವಲ್ಲಿ ಒಂದು ವಿಶೇಷ ಅರ್ಥವಿದೆ, ಯಾರಿಗೆ ಈ ಐದೂ ಸಂಶಯಗಳು ಸಂಪೂರ್ಣವಾಗಿ ನಿವೃತ್ತಿಯನ್ನು ಹೊಂದಿರುವವೋ ಅವರಿಗೆ ಮೋಕ್ಷದ ಉಪಾಯವನ್ನು ತಿಳಿಯಲು ಏನೂ ಕಠಿಣವಾಗುವುದಿಲ್ಲ ಮತ್ತು ಶಿಷ್ಯನಿಗೆ ಇರುವ ವಿಶೇಷ ರೀತಿಯ ಜಿಜ್ಞಾಸೆಯಿಂದ ಅವಶ್ಯವಾಗಿ ಮೋಕ್ಷೋಪಾಯದ ಲಾಭವು ಆಗುತ್ತದೆ. ಇದು ಸದ್ಗುರು ವಚನದ ಆಶಯವಾಗಿದೆ.

ಕರ್ಮ್‌ಭಾವ್ ಅಜ್ಞಾನ್ ಛೇ, ಮೋಕ್ಷ್‌ಭಾವ್ ನಿಜ್‌ವಾಸ್ ।
ಅಂಧಕಾರ್ ಅಜ್ಞಾನ್ ಸಮ್, ನಾಶೇ ಜ್ಞಾನ್‌ಪ್ರಕಾಶ್ ॥98॥

ಕರ್ಮಭಾವವು ಜೀವನ ಅಜ್ಞಾನವಾಗಿದೆ. ಮೋಕ್ಷಭಾವವು ಜೀವನ ನಿಜಸ್ವಭಾವದಲ್ಲಿ ನಿಲ್ಲುವಿಕೆ ಆಗಿದೆ. ಅಜ್ಞಾನದ ಸ್ವಭಾವವು ಅಂಧಕಾರದಂತಿದೆ. ಆದ್ದರಿಂದ ಪ್ರಕಾಶವು ಬಂದ ಮೇಲೆ ವಿಶ್ವೋಕಾಲದಿಂದ ಇದ್ದ ಕತ್ತಲೆಯೂ ಸಹ ದೂರವಾಗುವಂತೆ ಅಜ್ಞಾನವು ಜ್ಞಾನಪ್ರಕಾಶದಿಂದ ನಷ್ಟವಾಗುತ್ತದೆ. (ಇದಕ್ಕೆ ದೀರ್ಘಕಾಲದ ಅಜ್ಞಾನವೆಂದು ಸಂಶಯವನ್ನು ಪಡುವ ಕಾರಣವಿಲ್ಲ.)

ಜೇ ಜೇ ಕಾರಣ್ ಬಂಧ್‌ನಾಂ, ತೇಹ್ ಬಂಧ್‌ನೋ ಪಂಥ್ ।
ತೇ ಕಾರಣ್ ಛೇದಕ್ ದಶಾ, ಮೋಕ್ಷ್‌ಪಂಥ್ ಭವ್ ಅಂತ್ ॥99॥

ಯಾವು ಯಾವುದು ಕರ್ಮಬಂಧಕ್ಕೆ ಕಾರಣವಾಗಿರುವುದೋ ಅದೆಲ್ಲ ಕರ್ಮಬಂಧಕ್ಕೆ ಮಾರ್ಗವಾಗಿದೆ. ಈ ಎಲ್ಲ ಕಾರಣಗಳನ್ನು ಛೇದಿಸುವ ಸ್ಥಿತಿಯು ಯಾವುದು ಇದೆಯೋ ಅದು ಮೋಕ್ಷಮಾರ್ಗವಾಗಿದೆ. ಅದೇ ಭವದ ಅಂತವಾಗಿದೆ.

ರಾಗ್ ದ್ವೇಷ್ ಅಜ್ಞಾನ್ ಏ, ಮುಖ್ಯ ಕರ್ಮ್‌ನೀ ಗ್ರಂಥ್ ।
ಥಾಯ್ ನಿವೃತ್ತಿ ಜೇಹ್‌ಥೀ, ತೇಜ್ ಮೋಕ್ಷ್‌ನೋ ಪಂಥ್ ॥100॥

ರಾಗ, ದ್ವೇಷ ಮತ್ತು ಅಜ್ಞಾನದ ಏಕತೆಯೇ ಕರ್ಮದ ಮುಖ್ಯ ಗಂಟಾಗಿದೆ. ಇವಿಲ್ಲದೆ ಕರ್ಮದ ಬಂಧನವು ಆಗುವುದಿಲ್ಲ. ಇವುಗಳ ನಿವೃತ್ತಿಯು ಯಾವುದರಿಂದ ಆಗುವುದೋ ಅದೇ ಮೋಕ್ಷದ ಮಾರ್ಗವಾಗಿದೆ.

ಆತ್ಮಾ ಸತ್ ಚೈತನ್ಯಮಯ್, ಸರ್ವಾಭಾಸ್ ರಹಿತ್ ।
ಜೇಥೀ ಕೇವಳ್ ಪಾಮಿಯೇ, ಮೋಕ್ಷ್‌ಪಂಥ್ ತೇ ರೀತ್ ॥101॥

"ಸತ್" - ಅಂದರೆ ಅವಿನಾಶೀ, "ಚೈತನ್ಯಮಯ" ಅಂದರೆ ಸರ್ವ ಭಾವಗಳನ್ನು ಪ್ರಕಾಶಗೊಳಿಸುವ ಸ್ವಭಾವಮಯ, ಅನ್ಯ ಸರ್ವವಿಭಾವ ಮತ್ತು ದೇಹಾದಿ ಸಂಯೋಗಗಳ ಆಭಾಸರಹಿತವಾದ ಮತ್ತು "ಕೇವಲ" ಅಂದರೆ ಶುದ್ಧಾತ್ಮಸ್ಥಿತಿಯನ್ನು ಹೊಂದುವುದು ಈ ರೀತಿಯ ಪ್ರವೃತ್ತಿಯನ್ನು ಮಾಡುವುದು - ಇದೇ ಮೋಕ್ಷಮಾರ್ಗವಾಗಿದೆ.

ಕರ್ಮ್ ಅನಂತ್ ಪ್ರಕಾರ್‌ನಾಂ, ತೇಮಾಂ ಮುಖ್ಯೇ ಆಠ್ ।
ತೇಮಾಂ ಮುಖ್ಯೇ ಮೋಹ್‌ನೀಯ್, ಹಣಾಯ್ ತೇ ಕಹುಂ ಪಾಠ್ ॥102॥

ಕರ್ಮವು ಅನಂತ ಪ್ರಕಾರವಾಗಿದೆ. ಅದರಲ್ಲಿ ಜ್ಞಾನಾವರಣಾದಿ ಮುಖ್ಯ ಎಂಟು ಭೇದಗಳು ಇವೆ. ಇವುಗಳಲ್ಲಿಯೂ ಮುಖ್ಯ ಕರ್ಮವು ಮೋಹನೀಯ ಕರ್ಮವಾಗಿದೆ. ಯಾವುದರಿಂದ ಮೋಹನೀಯ ಕರ್ಮದ ನಾಶವಾಗುವುದೋ ಅದರ ಉಪಾಯವನ್ನು ಹೇಳುತ್ತೇನೆ.

ಕರ್ಮ್ ಮೋಹಿನೀಯ್ ಭೇದ್ ಬೇ, ದರ್ಶನ್ ಚಾರಿತ್ರ ನಾಮ್ ।
ಹಣೇ ಬೋಧ್ ವೀತ್‌ರಾಗ್‌ತಾ, ಅಚೂಕ್ ಉಪಾಯ್ ಆಮ್ ॥103॥

ಆ ಮೋಹನೀಯ ಕರ್ಮದಲ್ಲಿ ಎರಡು ಭೇದಗಳಿವೆ. ಒಂದು ದರ್ಶನ ಮೋಹನೀಯ, ಇನ್ನೊಂದು ಚಾರಿತ್ರಮೋಹನೀಯ. ಪರಮಾರ್ಥದಲ್ಲಿ ಅಪರಮಾರ್ಥ ಬುದ್ಧಿ ಮತ್ತು ಅಪರಮಾರ್ಥದಲ್ಲಿ ಪರಮಾರ್ಥ ಬುದ್ಧಿಯನ್ನಿಡುವುದಕ್ಕೆ ದರ್ಶನ ಮೋಹನೀಯವೆಂದು ಹೇಳುತ್ತಾರೆ. ಇನ್ನೂ ಯೋಗ್ಯರೂಪದಲ್ಲಿರುವ ಪರಮಾರ್ಥವನ್ನು ತಿಳಿದುಕೊಂಡು ಆತ್ಮಸ್ವಭಾವದಲ್ಲಿ ಯಾವ ಸ್ಥಿರತೆಯು ಉಂಟಾಗುವುದೋ ಈ ಸ್ಥಿರತೆಯನ್ನು ನಿರೋಧ ಮಾಡುವಂಥ ಪೂರ್ವ ಸಂಸ್ಕಾರ ರೂಪ ಕಪಾಯ ಹಾಗೂ ನೋಕಪಾಯಗಳಿಗೆ ಚಾರಿತ್ರ ಮೋಹನೀಯ ಎಂದು ಹೇಳುತ್ತಾರೆ.

**ಕರ್ಮ್‌ಬಂಧ್ ಕ್ರೋಧಾದಿಥೀ, ಹಣೇ ಕ್ಷಮಾದಿಕ್ ತೇಹ್ ।**
**ಪ್ರತ್ಯಕ್ಷ್ ಅನುಭವ್ ಸರ್ವ್‌ನೇ, ಏಮಾಂ ಶೋ ಸಂದೇಹ್ ? ॥104॥**

ಕ್ರೋಧಾದಿ ಭಾವಗಳಿಂದ ಕರ್ಮಬಂಧವು ಆಗುತ್ತದೆ. ಹಾಗೆಯೇ ಕ್ಷಮೆಯೇ ಮೊದಲಾದವುಗಳಿಂದ ಅದರ ನಾಶವಾಗುತ್ತದೆ. ಅರ್ಥಾತ್ ಕ್ಷಮೆಯನ್ನು ಧಾರಣೆಮಾಡುವುದರಿಂದ ಕ್ರೋಧವು ತಡೆಯಲ್ಪಡುತ್ತದೆ. ಸರಳತೆಯಿಂದ ಮಾಯೆಯು ತಡೆಯಲ್ಪಡುತ್ತದೆ. ಸಂತೋಷದಿಂದ ಲೋಭವು ತಡೆಯಲ್ಪಡುತ್ತದೆ. ಇದೇ ರೀತಿಯಲ್ಲಿ ರತಿ ಅರತಿ ಮೊದಲಾದುವುಗಳ ಪ್ರತಿಪಕ್ಷ ಇವೆಲ್ಲವುಗಳನ್ನು ತಡೆಯಬಹುದು. ಇದೇ ಕರ್ಮಬಂಧದ ನಿರೋಧವಾಗಿದೆ. ಅದೇ ಅದರ ನಿವೃತ್ತಿಯಾಗಿದೆ. ಈ ಮಾತಿನ ಪ್ರತ್ಯಕ್ಷ ಅನುಭವವು ಎಲ್ಲರಿಗೂ ಇದೆ ಅಥವಾ ಇದು ಎಲ್ಲರೂ ಅನುಭವಿಸುವಂಥದಾಗಿದೆ. ಕ್ರೋಧಾದಿಗಳನ್ನು ತಡೆದರೆ ತಡೆಯಬಹುದು. ಇವು ಕರ್ಮಬಂಧವನ್ನು ತಡೆಯುತ್ತದೆ. ಇವು ಅಕರ್ಮದೆಶೆಯ ಮಾರ್ಗವಾಗಿವೆ. ಈ ಮಾರ್ಗಗಳು ಪರಲೋಕದಲ್ಲಿ ಅಲ್ಲ, ಇಲ್ಲಿಯೇ ಅನುಭವಕ್ಕೆ ಬರುತ್ತವೆ. ಆದ್ದರಿಂದ ಇದರಲ್ಲಿ ಏಕೆ ಸಂದೇಹ ಮಾಡಬೇಕು ?

**ಛೋಡೀ ಮತ್ ದರ್ಶನ್ ತಣೋ, ಆಗ್ರಹ್ ತೇಮ್ ವಿಕಲ್ಪ್ ।**
**ಕಹ್ಯೋ ಮಾರ್ಗ್ ಆ ಸಾಧ್‌ಶೇ, ಜನ್ಮ್ ತೇಹ್‌ನಾ ಅಲ್ಪ್ ॥105॥**

ಇದು ನನ್ನ ಮತವಾಗಿದೆ. ಆದ್ದರಿಂದ ನಾನು ನನ್ನ ಮತವನ್ನು ಅನುಸರಿಸಲೇಬೇಕು. ಇದು ನನ್ನ ದರ್ಶನವಾಗಿದೆ. ಆದ್ದರಿಂದ ಏನೇ ಬರಲಿ ಯಾವುದೇ ರೀತಿಯಿಂದ ಇದನ್ನು ಸಿದ್ಧ ಮಾಡಲೇಬೇಕು. ಇಂಥ ಆಗ್ರಹ ಅಥವಾ ವಿಕಲ್ಪವನ್ನು ಬಿಟ್ಟು ಮೇಲೆ ಹೇಳಿದ ಮಾರ್ಗದ ಸಾಧನೆಯನ್ನು ಯಾರು ಮಾಡುವರೋ ಅವರಿಗೆ ಇನ್ನು ಕೆಲವೇ ಜನ್ಮಗಳು ಉಳಿದಿವೆಯೆಂದು ತಿಳಿಯಬೇಕು.

**ಷಟ್‌ಪದ್‌ನಾಂ ಷಟ್‌ಪ್ರಶ್ನ ತೇಂ, ಪೂಛ್ಯಾಂ ಕರೀ ವಿಚಾರ್ ।**
**ತೇ ಪದ್‌ನೀ ಸರ್ವಾಂಗ್‌ತಾ, ಮೋಕ್ಷ್‌ಮಾರ್ಗ್ ನಿರ್ಧಾರ್ ॥106॥**

ಎಲೈ ಶಿಷ್ಯನೇ ! ನೀನು ವಿಚಾರಮಾಡಿ ಆರು ಪದಗಳ ಆರು ಪ್ರಶ್ನೆಗಳನ್ನು ಕೇಳಿರುವೆಯೋ ಆ ಪದಗಳ ಸರ್ವಾಂಗ ರೂಪದಲ್ಲಿ ಮೋಕ್ಷಮಾರ್ಗವಿದೆ ಎಂದು ನಿಶ್ಚಯವಾಗಿ ತಿಳಿ. ಇವುಗಳಲ್ಲಿ ಯಾವ ಪದವನ್ನು ಏಕಾಂತದಿಂದ ಅಥವಾ ಅವಿಚಾರದಿಂದ ಉತ್ಥಾಪನ ಮಾಡುವುದರಿಂದ ಮೋಕ್ಷಮಾರ್ಗವು ಸಿದ್ಧವಾಗುವುದಿಲ್ಲ.

**ಜಾತಿ ವೇಷ್‌ನೋ ಭೇದ್ ನಹಿ, ಕಹ್ಯೋ ಮಾರ್ಗ್ ಜೋ ಹೋಯ್ ।**
**ಸಾಧೇ ತೇ ಮುಕ್ತಿ ಲಹೇ, ಏಮಾಂ ಭೇದ್ ನ ಕೋಯ್ ॥107॥**

ಯಾವುದನ್ನು ಮೋಕ್ಷಮಾರ್ಗವೆಂದೂ ಹೇಳಿದೆಯೋ ಅದನ್ನು ಸಾಧಿಸಿದರೆ ಯಾವ ಜಾತಿ ಅಥವಾ ವೇಷವುಳ್ಳವನಿಗೂ ಸಹ ಮುಕ್ತಿಯು ಲಭಿಸುತ್ತದೆ. ಇದರಲ್ಲಿ ಯಾವ ಭೇದವೂ ಇಲ್ಲ. ಯಾರು ಇದನ್ನು ಸಾಧಿಸುತ್ತಾರೋ ಅವರು ಮೋಕ್ಷಪದವನ್ನು ಹೊಂದುವರು. ಅಲ್ಲದೆ ಈ ಮೋಕ್ಷಪದದಲ್ಲಿ ಬೇರೆ ಯಾವ ಉಚ್ಚ ನೀಚಾದಿ ಭೇದಗಳಿಲ್ಲ ಅಥವಾ ಇಲ್ಲಿ ಹೇಳಿದ ವಚನಗಳಲ್ಲಿಯೂ ಇನ್ನಾವ ಹೆಚ್ಚು ಕಡಿಮೆಯೂ ಇಲ್ಲ.

**ಕಷಾಯ್‌ನೀ ಉಪ್‌ಶಾಂತತಾ, ಮಾತ್ರ್ ಮೋಕ್ಷ್ ಅಭಿಲಾಷ್ ।**
**ಭವೇ ಖೇದ್ ಅಂತರ್ ದಯಾ, ತೇ ಕಹಿಯೇ ಜಿಜ್ಞಾಸ್ ॥108॥**

ಯಾರ ಕ್ರೋಧಾದಿ ಕಷಾಯಗಳು ಮಂದವಾಗಿವೆಯೋ, ಆತ್ಮನಲ್ಲಿ ಮೋಕ್ಷವನ್ನುಳಿದು ಇನ್ನಾವ ಬೇರೆ ಅಪೇಕ್ಷೆಯು ಇರುವುದಿಲ್ಲವೋ, ಸಂಸಾರದ ಭೋಗಗಳ ವಿಷಯದಲ್ಲಿ ಯಾರ ಅಂತರಂಗದಲ್ಲಿ ದಯೆಯು ಇರುವುದೋ, ಇಂಥ ಜೀವಗಳಿಗೆ ಮೋಕ್ಷಮಾರ್ಗದ ಜಿಜ್ಞಾಸುಗಳೆಂದು ಹೇಳುತ್ತಾರೆ ಅರ್ಥಾತ್ ಇಂಥ ಜೀವಗಳೇ ಮೋಕ್ಷಮಾರ್ಗವನ್ನು ಹೊಂದಲು ಯೋಗ್ಯರಾಗಿದ್ದಾರೆ.

**ತೇ ಜಿಜ್ಞಾಸು ಜೀವ್‌ನೇ, ಥಾಯ್ ಸದ್ಗುರು ಬೋಧ್ ।**
**ತೋ ಪಾಮೇ ಸಮ್‌ಕಿತ್‌ನೇ, ವರ್ತೇ ಅಂತರ್ ಶೋಧ್ ॥109॥**

ಇಂಥ ಜಿಜ್ಞಾಸು ಜೀವಗಳಿಗೆ ಸದ್ಗುರುವಿನ ಉಪದೇಶವು ಲಭಿಸಿದರೆ ಅವರು ಸಮಕೀತವನ್ನು ಹೊಂದುತ್ತಾರೆ. ಮತ್ತು ಆಂತರಿಕ ಶೋಧನೆಯಲ್ಲಿ ತೊಡಗುತ್ತಾರೆ.

**ಮತ್‌ದರ್ಶನ್ ಆಗ್ರಹ್ ತಜೀ, ವರ್ತೇ ಸದ್ಗುರು ಲಕ್ಷ್ ।**

**ಲಹೇ ಶುದ್ಧ್ ಸಮ್‌ಕಿತ್ ತೇ, ಜೇಮಾಂ ಭೇದ್ ನ ಪಕ್ಷ್ ॥110॥**

ಮತ ಹಾಗೂ ದರ್ಶನಗಳ ಆಗ್ರಹವನ್ನು ಬಿಟ್ಟು ಯಾವನು ಸದ್ಗುರುವಿನ ಗುರಿಯ ಕಡೆಗೆ ಧಾವಿಸುತ್ತಾನೆಯೋ ಅವನು ಶುದ್ಧ ಸಮಕಿತವನ್ನು ಪಡೆಯುತ್ತಾನೆ. ಇದರಲ್ಲಿ ಯಾವ ಭೇದವೂ ಯಾವ ಪಕ್ಷವೂ ಇಲ್ಲ.

**ವರ್ತೇ ನಿಜ್ ಸ್ವಭಾವ್‌ನೋ, ಅನುಭವ್ ಲಕ್ಷ್ ಪ್ರತೀತ್ ।**

**ವೃತ್ತಿ ವಹೇ ನಿಜ್‌ಭಾವ್‌ಮಾಂ, ಪರ್‌ಮಾರ್ಥೇ ಸಮ್‌ಕಿತ್ ॥111॥**

ಎಲ್ಲಿ ಆತ್ಮ ಸ್ವಭಾವದ ಅನುಭವವೂ ಗುರಿಯೂ ಮತ್ತು ಪ್ರತೀತಿಯೂ ಇರುವುದೋ ಹಾಗೆಯೇ ಆತ್ಮಸ್ವಭಾವದಲ್ಲಿ ವೃತ್ತಿಯು ಪ್ರವಹಿತವಾಗುವುದೋ ಅಲ್ಲಿಯೇ ಪರಮಾರ್ಥದಿಂದ ಸಮಕಿತವಾಗುತ್ತದೆ.

**ವರ್ಧಮಾನ್ ಸಮ್‌ಕಿತ್ ಥಈ, ಟಾಳೇ ಮಿಥ್ಯಾಭಾಸ್ ।**

**ಉದಯ್ ಥಾಯ್ ಚಾರಿತ್ರನೋ, ವೀತ್‌ರಾಗ್ ಪದ್ ವಾಸ್ ॥112॥**

ಈ ಸಮಕಿತವು ವೃದ್ಧಿಯಾಗುತ್ತಿರುವ ಪ್ರಭಾವದಿಂದ ಹಾಸ್ಯ, ಶೋಕ ಮೊದಲಾದ ಆತ್ಮನಲ್ಲಿ ಆಗುವ ಮಿಥ್ಯಾ ಆಭಾಸಗಳನ್ನು ದೂರಗೊಳಿಸುತ್ತದೆ. ಮತ್ತು ಆದರಿಂದ ಸ್ವಭಾವ-ಸಮಾಧಿ-ರೂಪ ಚಾರಿತ್ರದ ಉದಯವಾಗುತ್ತದೆ. ಇದರಿಂದ ಸಮಸ್ತ ರಾಗ-ದ್ವೇಷದ ಕ್ಷಯ-ಸ್ವರೂಪ ವೀತರಾಗ ಪದದಲ್ಲಿ ಸ್ಥಿತಿಯಾಗುತ್ತದೆ.

**ಕೇವಳ್ ನಿಜ್ ಸ್ವಭಾವ್‌ನುಂ, ಅಖಂಡ್ ವರ್ತೇ ಜ್ಞಾನ್ ।**

**ಕಹಿಯೇ ಕೇವಳ್ ಜ್ಞಾನ್ ತೇ, ದೇಹ್ ಛತಾಂ ನಿರ್ವಾಣ್ ॥113॥**

ಎಲ್ಲಿ ಸರ್ವ ಆಭಾಸಗಳು ಇಲ್ಲದ ಆತ್ಮ ಸ್ವಭಾವದ ಅಖಂಡ-ಅಂದರೆ ಯಾವುದು ಎಂದೂ ಖಂಡಿತವಾಗಲಾರದೋ, ಮಂದವಾಗಲಾರದೋ ನಾಶವಾಗಲಾರದೋ ಅಂಥ ಜ್ಞಾನವು ಇರುತ್ತದೆ. ಇದಕ್ಕೆ ಕೇವಲ ಜ್ಞಾನವೆಂದು ಹೇಳುವರು. ಈ ಕೇವಲ ಜ್ಞಾನವನ್ನು ಪಡೆಯುವುದರಿಂದ ದೇಹವಿದ್ದರೂ ಕೂಡ ಉತ್ಕೃಷ್ಟ ಜೀವನ್ಮುಕ್ತ ಸ್ಥಿತಿಯ ನಿರ್ವಾಣವು ಇಲ್ಲಿಯೇ ಅನುಭವಕ್ಕೆ ಬರುತ್ತದೆ.

**ಕೋಟಿ ವರ್ಷನುಂ ಸ್ವಪ್ನ ಪಣ್, ಜಾಗ್ರತ ಥತಾಂ ಶಮಾಯ್ ।**

**ತೇಮ್ ವಿಭಾವ್ ಅನಾದಿನೋ, ಜ್ಞಾನ್ ಥತಾಂ ದೂರ್ ಥಾಯ್ ॥114॥**

ಕೋಟ್ಯವಧಿ ವರ್ಷದ ಸ್ವಪ್ನವೂ ಸಹ ಎಚ್ಚರವಾದ ಕೂಡಲೇ ಇಲ್ಲದಂತೆ ಆಗುತ್ತದೆ. ಅದೇ ಪ್ರಕಾರ ಅನಾದಿಕಾಲದ ವಿಭಾವವು ಕೂಡ ಆತ್ಮಜ್ಞಾನವಾದಕೂಡಲೇ ದೂರವಾಗುತ್ತದೆ.

**ಛೂಟೇ ದೇಹಾಧ್ಯಾಸ್ ತೋ, ನಹಿ ಕರ್ತಾ ತುಂ ಕರ್ಮ್ ।**

**ನಹಿ ಭೋಕ್ತಾ ತುಂ ತೇಹ್‌ನೋ, ಏ ಜ ಧರ್ಮನೋ ಮರ್ಮ್ ॥115॥**

ಎಲೈ ಶಿಷ್ಯನೇ! ಜೀವನು ದೇಹವನ್ನೇ ಆತ್ಮನೆಂದು ನಂಬಿದ್ದಾನೆ. ಇದರಿಂದ ಸ್ತ್ರೀ ಪುತ್ರ ಮೊದಲಾದ ಎಲ್ಲದರಲ್ಲಿಯೂ ಅಹಂಭಾವ ಮತ್ತು ಮಮತ್ವ ಭಾವವನ್ನು ಹೊಂದಿದ್ದಾನೆ. ಆದರೆ ಈ ಆತ್ಮಭಾವವು ಆತ್ಮನಲ್ಲಿಯೇ ನೆಲೆಸಿದ್ದಾದರೆ "ದೇಹಕ್ಕೆ ಆತ್ಮನೆಂದು ತಿಳಿಯುವುದು, ಆತ್ಮನನ್ನು ದೇಹವೆಂದು ತಿಳಿಯುವುದು" ಈ ದೇಹಾಧ್ಯಾಸವು ದೂರವಾದರೆ, ನೀನು ಕರ್ಮದ ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಇದೇ ಧರ್ಮದ ಮರ್ಮವಾಗಿದೆ.

**ಏ ಜ ಧರ್ಮ್‌ಥೀ ಮೋಕ್ಷ್ ಛೇ, ತುಂ ಛೋ ಮೋಕ್ಷ್ ಸ್ವರೂಪ್ ।**

**ಅನಂತ್ ದರ್ಶನ್ ಜ್ಞಾನ್ ತುಂ, ಅವ್ಯಾಬಾಧ್ ಸ್ವರೂಪ್ ॥116॥**

ಇದೇ ಧರ್ಮದಿಂದ ಮೋಕ್ಷವು ಲಭಿಸುತ್ತದೆ. ನೀನೇ ಮೋಕ್ಷಸ್ವರೂಪನಾಗಿರುವಿ. ಅರ್ಥಾತ್ ಶುದ್ಧ ಆತ್ಮಪದವೇ ಮೋಕ್ಷವಾಗಿದೆ. ನೀನು ಅನಂತ ದರ್ಶನ ಜ್ಞಾನ ಹಾಗೂ ಅವ್ಯಾಬಾಧಸ್ವರೂಪನಾಗಿರುವಿ.

ಶುದ್ಧ್ ಬುದ್ಧ್ ಚೈತನ್ಯಘನ್, ಸ್ವಯಂಜ್ಯೋತಿ ಸುಖ್‌ಧಾಮ್ ।

ಬೀಜುಂ ಕಹೀಯೆ ಕೇಟ್‌ಲುಂ, ಕರ್ ವಿಚಾರ್ ತೋ ಪಾಮ್ ॥117॥

ನೀನು ದೇಹಾದಿ ಎಲ್ಲ ಪದಾರ್ಥಗಳಿಂದ ಭಿನ್ನನಾಗಿರುವಿ. ಆತ್ಮದ್ರವ್ಯವು ಬೇರೆ ಯಾವುದರಲ್ಲಿಯೂ ಕೂಡುವುದಿಲ್ಲ. ಆತ್ಮದ್ರವ್ಯದಲ್ಲಿಯೂ ಬೇರೆ ಏನೂ ಕೂಡುವುದಿಲ್ಲ. ಪರಮಾರ್ಥ ದೃಷ್ಟಿಯಿಂದ ಒಂದು ದ್ರವ್ಯವು ಇನ್ನೊಂದು ದ್ರವ್ಯದಿಂದ ಯಾವಾಗಲೂ ಭಿನ್ನವಾಗಿರುತ್ತದೆ. ಆದ್ದರಿಂದ ನೀನು ಶುದ್ಧನಾಗಿರುವಿ. ಬೋಧಸ್ವರೂಪನಾಗಿರುವಿ. ಚೈತನ್ಯಪ್ರದೇಶಾತ್ಮಕನಾಗಿರುವಿ. ಸ್ವಯಂಜ್ಯೋತಿಯಾಗಿರುವಿ. ನಿನ್ನನ್ನು ಪ್ರಕಟಗೊಳಿಸುವವರು ಯಾರೂ ಇಲ್ಲ. ನೀನು ಸ್ವಭಾವದಿಂದಲೇ ಪ್ರಕಾಶಮಾನನಾಗಿರುವಿ. ಅವ್ಯಾಬಾಧಸುಖಧಾಮನಾಗಿರುವಿ. ಹೆಚ್ಚಿಗೆ ಏನು ಹೇಳಲಿ ? ಸಂಕ್ಷೇಪವಾಗಿ ಇಷ್ಟೇ ಹೇಳಲಾಗುತ್ತದೆ. ನೀನು ಹೇಗೆ ವಿಚಾರ ಮಾಡುತ್ತಿಯೋ ಆ ಪದವನ್ನು ಹೊಂದುವಿ.

ನಿಶ್ಚಯ್ ಸರ್ವೇ ಜ್ಞಾನಿನೋ, ಆವೀ ಅತ್ರ ಸಮಾಯ್ ।

ಧರೀ ಮೌನ್‌ತಾ ಏಮ್ ಕಹೀ, ಸಹಜ್ ಸಮಾಧಿ ಮಾಯ್ ॥118॥

ಎಲ್ಲ ಜ್ಞಾನಿಗಳ ನಿಶ್ಚಯವೂ ಇದರಲ್ಲಿಯೇ ಬಂದು ಸಮಾವೇಶವಾಗುತ್ತದೆ. ಇದನ್ನು ಹೇಳಿ ಸದ್ಗುರುವು ಮೌನವನ್ನು ಧರಿಸಿ- ವಚನ ಯೋಗದ ಪ್ರವೃತ್ತಿಯನ್ನು ತ್ಯಾಗಮಾಡಿ-ಸಹಜ ಸಮಾಧಿಯಲ್ಲಿ ಸ್ಥಿತನಾದನು.

## ಶಿಷ್ಯ-ಬೋಧ ಬೀಜ ಪ್ರಾಪ್ತಿ ಕಥನ :-

ಸದ್ಗುರುನಾ ಉಪದೇಶ್‌ಥೀ, ಆವ್ಯುಂ ಅಪೂರ್ವ್ ಭಾನ್ ।

ನಿಜ್‌ಪದ್ ನಿಜ್‌ಮಾಂಹೀ ಲಹ್ಯುಂ, ದೂರ್ ಥಯುಂ ಅಜ್ಞಾನ್ ॥119॥

ಶಿಷ್ಯನಿಗೆ ಸದ್ಗುರುವಿನ ಉಪದೇಶದಿಂದ ಅಪೂರ್ವ-ಅಂದರೆ ಈ ಮೊದಲು ಎಂದೂ ಪ್ರಾಪ್ತವಾಗಿರಲಿಲ್ಲದಂತಹ- ತಿಳುವಳಿಕೆ ಉಂಟಾಯಿತು. ಆದರಿಂದ ತನ್ನ ಸ್ವರೂಪವು ಇದ್ದಕ್ಕಿದ್ದಂತೆ ಭಾಸವಾಗ ಹತ್ತಿತು. ದೇಹದಲ್ಲಿರುವ ಆತ್ಮಬುದ್ಧಿರೂಪ ಅವನ ಅಜ್ಞಾನವು ದೂರವಾಯಿತು.

ಭಾಸ್ಯುಂ ನಿಜ್ ಸ್ವರೂಪ್ ತೇ, ಶುದ್ಧ್ ಚೇತನಾ ರೂಪ್ ।

ಅಜರ್ ಅಮರ್ ಅವಿನಾಶಿ ನೇ, ದೇಹಾತೀತ್ ಸ್ವರೂಪ್ ॥120॥

ಅವನಿಗೆ ತನ್ನ ನಿಜವಾದ ಸ್ವರೂಪವು, ಶುದ್ಧ ಚೈತನ್ಯ ಸ್ವರೂಪ, ಅಜರ, ಅಮರ, ಅವಿನಾಶೀ ಮತ್ತು ದೇಹದಿಂದ ಸ್ಪಷ್ಟವಾಗಿ ಭಿನ್ನವೆಂದು ಭಾಸವಾಯಿತು.

ಕರ್ತಾ ಭೋಕ್ತಾ ಕರ್ಮನೋ, ವಿಭಾವ್ ವರ್ತೇ ಜ್ಯಾಂಯ್ ।

ವೃತ್ತಿ ವಹೀ ನಿಜ್‌ಭಾವ್‌ಮಾಂ, ಥಯೋ ಅಕರ್ತಾ ತ್ಯಾಂಯ್ ॥121॥

ಎಲ್ಲಿ ವಿಭಾವ ಅಂದರೆ ಮಿಥ್ಯಾತ್ವ ಇರುವುದೋ ಅಲ್ಲಿಯೇ ಮುಖ್ಯ ನಯದಿಂದ ಕರ್ಮದ ಕರ್ತೃತ್ವ ಮತ್ತು ಭೋಕ್ತೃತ್ವಗಳು ಇರುತ್ತವೆ. ಆತ್ಮಸ್ವರೂಪದಲ್ಲಿ ವೃತ್ತಿಯೂ ಪ್ರವಹಿಸುವುದರಿಂದ ಆ ಜೀವನು ಕರ್ತಾ ಆಗಿಬಿಡುತ್ತಾನೆ.

ಅಥವಾ ನಿಜ್ ಪರಿಣಾಮ್ ಜೇ, ಶುದ್ಧ್ ಚೇತನಾ ರೂಪ್ ।

ಕರ್ತಾ ಭೋಕ್ತಾ ತೇಹ್‌ನೋ, ನಿರ್ವಿಕಲ್ಪ್ ಸ್ವರೂಪ್ ॥122॥

ಅಥವಾ ಶುದ್ಧ ಚೈತನ್ಯ ಸ್ವರೂಪವಾದಂಥ ಆತ್ಮ ಪರಿಣಾಮವು ಏನಿದೆಯೋ ಅದನ್ನೇ ಜೀವನು ನಿರ್ವಿಕಲ್ಪ ಸ್ವರೂಪದಿಂದ ಕರ್ತೃವೂ ಭೋಕ್ತೃವೂ ಆಗಿದ್ದಾನೆ.

ಮೋಕ್ಷ್ ಕಹ್ಯೋ ನಿಜ್ ಶುದ್ಧ್‌ತಾ, ತೇಪಾಮೇ ತೇ ಪಂಥ್ ।

ಸಮ್‌ಜಾವ್ಯೋ ಸಂಕ್ಷೇಪ್‌ಮಾಂ, ಸಕಳ್ ಮಾರ್ಗ್ ನಿರ್ಗ್ರಂಥ್ ॥123॥

ಆತ್ಮನ ಶುದ್ಧ ಪದವೇ ಮೋಕ್ಷವಾಗಿದೆ. ಆ ಮೋಕ್ಷವನ್ನು ಯಾವುದರಿಂದ ಸಂಪಾದಿಸಬಹುದೋ ಅದು ಮೋಕ್ಷ ಮಾರ್ಗವಾಗಿದೆ. ಶ್ರೀ ಸದ್ಗುರುವು ದಯೆತೋರಿ ನಿರ್ಗ್ರಂಥಾವಸ್ಥೆಯ ಎಲ್ಲ ಮಾರ್ಗಗಳನ್ನು ಹೇಳಿದ್ದಾನೆ.

**ಅಹೋ ! ಅಹೋ ! ಶ್ರೀ ಸದ್ಗುರು ! ಕರುಣಾಸಿಂಧು ಅಪಾರ್ ।**
**ಆ ಪಾಮರ್ ಪರ್ ಪ್ರಭು ಕರ್ಯೋ । ಅಹೋ ! ಅಹೋ ! ಉಪ್‌ಕಾರ್ ॥124॥**

ಎಲೈ ! ಎಲೈ ! ಅಪಾರ ಕರುಣಾಕರನೇ, ಕರುಣಾ ಸಾಗರನೇ, ಆತ್ಮ ಲಕ್ಷ್ಮಿಯಿಂದ ಕೂಡಿದ ಸದ್ಗುರುವೇ ! ತಾವು ಇಂಥ ಪಾಮರ ಜೀವನ ಮೇಲೆ ಆಶ್ಚರ್ಯಕರವಾದ ಉಪಕಾರವನ್ನು ಮಾಡಿರುವಿರಿ.

**ಶುಂ ಪ್ರಭು ಚರಣ್ ಕನೇ ಧರುಂ, ಆತ್ಮಾಥೀ ಸೌ ಹೀನ್ ।**
**ತೇ ತೋ ಪ್ರಭು ಏ ಆಪಿಯೋ, ವರ್ತುಂ ಚರಣಾಧೀನ್ ॥125॥**

ನಾನು ಸದ್ಗುರುಗಳ ಚರಣಸನ್ನಿಧಿಯಲ್ಲಿ ಏನನ್ನು ಅರ್ಪಿಸಲಿ ?(ಸದ್ಗುರುವಂತೂ ಪರಮ ನಿಷ್ಕಾಮನು, ಕೇವಲ ನಿಷ್ಕಾಮ ಕರುಣೆಯಿಂದಲೇ ಉಪದೇಶವನ್ನು ಕೊಡುವಂಥವರು. ಆದರೆ ಶಿಷ್ಯನು ಶಿಷ್ಯಧರ್ಮವನ್ನನುಸರಿಸಿ ಈ ಮಾತುಗಳನ್ನು ಹೇಳಿದ್ದಾನೆ.) ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳೂ ಆತ್ಮನ ಅಪೇಕ್ಷೆಯಿಂದ ಬೆಲೆಯಿಲ್ಲದವುಗಳಾಗಿವೆ. ಆದ್ದರಿಂದ ಅಂಥ ಆತ್ಮನನ್ನೇ ಧಾರಣ ಮಾಡಿದವರ ಪಾದಗಳ ಸಮೀಪದಲ್ಲಿ ನಾನು ಬೇರೆ ಯಾವ ಕಾಣಿಕೆಯನ್ನು ಸಲ್ಲಿಸಲಿ ? ಕೇವಲ ಉಪಚಾರಕ್ಕಾಗಿ ಇಷ್ಟನ್ನು ಮಾಡಲು ಸಮರ್ಥನಾಗಿರುವೆನು ಅಂದರೆ ನಾನು ಸದ್ಗುರುವಿನ ಚರಣಗಳ ಆಶ್ರಯದಲ್ಲಿಯೇ ಇರುವೆನು.

**ಆ ದೇಹಾದಿ ಆಜ್‌ಥೀ, ವರ್ತೋ ಪ್ರಭು ಆಧೀನ್ ।**
**ದಾಸ್, ದಾಸ್, ಹುಂ ದಾಸ್ ಛುಂ, ತೇಹ್ ಪ್ರಭೂನೋ ದೀನ್ ॥126॥**

ಈ ದೇಹಾದಿ ಶಬ್ದಗಳಿಂದ ಯಾವುದನ್ನು ನನ್ನದು ಎಂದು ತಿಳಿಯಲಾಗುವುದೋ ಅದೆಲ್ಲವೂ ಇಂದಿನಿಂದ ಸದ್ಗುರುವಿನ ಅಧೀನವಾಗಿದೆ. ನಾನು ಈ ಪ್ರಭುವಿನ ದಾಸನಾಗಿರುವೆ, ದೀನ ದಾಸನಾಗಿರುವೆ.

**ಷಟ್ ಸ್ಥಾನಕ್ ಸಮ್‌ಜಾವೀನೇ, ಭಿನ್ನ ಬತಾವ್ಯೋ ಆಪ್ ।**
**ಮ್ಯಾನ್ ಥಕೀ ತರ್‌ವಾರ್‌ವತ್, ಏ ಉಪ್‌ಕಾರ್ ಅಮಾಪ್ ॥127॥**

ಎಲೈ ಸದ್ಗುರುವೇ ! ಆರು ಸ್ಥಾನಗಳ ತಿಳುವಳಿಕೆಯನ್ನು ಮಾಡಿಕೊಟ್ಟಿರುವಿರಿ. ಒರೆಯಿಂದ ಖಡ್ಗವನ್ನು ಹೊರಗೆ ತೆಗೆದು ತೋರಿಸುವಂತೆ ನಮ್ಮ ದೇಹಾದಿಗಳಿಂದ ಆತ್ಮನು ಭಿನ್ನ ಎಂದು ಸ್ಪಷ್ಟವಾಗಿ ಹೇಳಿದಿರಿ. ಇದರಿಂದ ನೀವು ನನ್ನ ಮೇಲೆ ಅಪಾರ ಉಪಕಾರವನ್ನು ಮಾಡಿರುವಿರಿ.

**ಉಪಸಂಹಾರ :-**

**ದರ್ಶನ್ ಷಟೇ ಸಮಾಯ್ ಛೇ, ಆ ಷಟ್ ಸ್ಥಾನಕ್ ಮಾಂಹೀ ।**
**ವಿಚಾರ್‌ತಾಂ ವಿಸ್ತಾರ್‌ಥೀ, ಸಂಶಯ್ ರಹೇ ನ ಕಾಂಈ ॥128॥**

ಆರು ದರ್ಶನಗಳು ಈ ಆರು ಸ್ಥಾನಗಳಲ್ಲಿ ಸಮಾವೇಶವಾಗುತ್ತವೆ. ಇದನ್ನು ವಿಶೇಷವಾಗಿ ವಿಚಾರಮಾಡುವುದರಿಂದ ಇದರಲ್ಲಿ ಯಾವ ಪ್ರಕಾರವಾದ ಸಂಶಯವೂ ಉಳಿಯುವುದಿಲ್ಲ.

**ಆತ್ಮಭ್ರಾಂತಿ ಸಮ್ ರೋಗ್ ನಹಿ, ಸದ್ಗುರು ವೈದ್ಯ ಸುಜಾಣ್ ।**
**ಗುರು ಆಜ್ಞಾ ಸಮ್ ಪಥ್ಯ ನಹಿ, ಔಷಧ್ ವಿಚಾರ್ ಧ್ಯಾನ್ ॥129॥**

ಆತ್ಮನು ತನ್ನ ಸ್ವರೂಪವನ್ನು ತಾನು ಮರೆಯುವುದಕ್ಕಿಂತ ಹೆಚ್ಚಿನ ರೋಗವು ಇನ್ನಾವುದೂ ಇಲ್ಲ. ಅದಕ್ಕೆ ಸದ್ಗುರುವಿನಂಥ ಯೋಗ್ಯ ವೈದ್ಯನು ಬೇರೊಬ್ಬನಿಲ್ಲ. ಸದ್ಗುರುವಿನ ಆಜ್ಞೆಯಂತೆ ನಡೆಯುವುದಕ್ಕೆ ಸಮಾನವಾದ ಪಥ್ಯವು ಇನ್ನೊಂದಿಲ್ಲ. ವಿಚಾರ ಹಾಗೂ ನಿದಿಧ್ಯಾಸನಕ್ಕೆ ಸಮಾನವಾದ ಬೇರೆ ಯಾವ ಔಷಧಿಯೂ ಅದಕ್ಕೆ ಇಲ್ಲ.

**ಜೋ ಇಚ್ಛೋ ಪರ್‌ಮಾರ್ಥ್ ತೋ, ಕರೋ ಸತ್ಯ ಪುರುಷಾರ್ಥ್ ।**
**ಭವ್‌ಸ್ಥಿತಿ ಆದಿ ನಾಮ್ ಲಈ, ಛೇದೋ ನಹಿ ಆತ್ಮಾರ್ಥ್ ॥130॥**

ನೀನು ನಿಜವಾಗಿಯೂ ಪರಮಾರ್ಥದ ಇಚ್ಛೆಯನ್ನು ಮಾಡುವುದಾದರೆ ಯೋಗ್ಯ ಪುರುಷಾರ್ಥವನ್ನು ಮಾಡು. ಭವಸ್ಥಿತಿ ಮೊದಲಾದವುಗಳ ಹೆಸರನ್ನು ತಕ್ಕೊಂಡು ಆತ್ಮಾರ್ಥದ ಛೇದನವನ್ನು ಮಾಡಬೇಡ.

**ನಿಶ್ಚಯ್ ವಾಣೀ ಸಾಂಭ್‌ಳೀ, ಸಾಧನ್ ತಜ್‌ವಾಂ ಸೋಯ್ ।**
**ನಿಶ್ಚಯ್ ರಾಖೀ ಲಕ್ಷ್‌ಮಾಂ, ಸಾಧನ್ ಕರ್‌ವಾಂ ಸೋಯ್ ॥131॥**

ಆತ್ಮನು ಅಬಂಧನು, ಅಸಂಗನು, ಸಿದ್ಧನು. ಈ ನಿಶ್ಚಯನಯ ಮುಖ್ಯ ಮಾತುಗಳನ್ನು ಕೇಳಿ ಸಾಧನಗಳನ್ನು ತ್ಯಾಗಮಾಡುವುದು ಯೋಗ್ಯವಲ್ಲ. ಅದರ ಅಂತಹ ನಿಶ್ಚಯವನ್ನು ಲಕ್ಷದಲ್ಲಿಟ್ಟು ಸಾಧನೆಯನ್ನು ಮಾಡಿ ನಿಶ್ಚಯಸ್ವರೂಪವನ್ನು ಪಡೆಯಬೇಕು.

**ನಯ್ ನಿಶ್ಚಯ್ ಏಕಾಂತ್‌ಥೀ, ಆಮಾಂ ನಥೀ ಕಹೇಲ್ ।**
**ಏಕಾಂತೇ ವ್ಯವ್‌ಹಾರ್ ನಹಿ, ಬನ್ನೇ ಸಾಥ್ ರಹೇಲ್ ॥132॥**

ಇಲ್ಲಿ ಏಕಾಂತದೃಷ್ಟಿಯಿಂದ ನಿಶ್ಚಯನಯವನ್ನು ಹೇಳಿಲ್ಲ. ಹಾಗೆಯೇ ಏಕಾಂತದೃಷ್ಟಿಯಿಂದ ವ್ಯವಹಾರನಯವನ್ನೂ ಹೇಳಿಲ್ಲ. ಎರಡೂ, ಎಲ್ಲೆಲ್ಲಿ ಹೇಗೆ ಹೇಗೆ ಸಂಭವಿಸುತ್ತವೆಯೋ ಅದೇ ರೀತಿ ಜೊತೆಯಾಗಿ ಇರುತ್ತವೆ.

**ಗಚ್ಛಮತ್‌ನೀ ಜೇ ಕಲ್ಪನಾ, ತೇ ನಹಿ ಸದ್‌ವ್ಯವ್‌ಹಾರ್ ।**
**ಭಾನ್ ನಹೀಂ ನಿಜ್‌ರೂಪ್‌ನುಂ, ತೇ ನಿಶ್ಚಯ್ ನಹಿ ಸಾರ್ ॥133॥**

ಗಚ್ಛ, ಮತದ ಕಲ್ಪನೆಯು ಸದ್‌ವ್ಯವಹಾರವಾಗಿಲ್ಲ. ಆದರೆ ಆತ್ಮಾರ್ಥಿಯ ಲಕ್ಷಣದಲ್ಲಿ ಹೇಳಿರುವ ಸ್ಥಿತಿ, ಮೋಕ್ಷದ ಉಪಾಯದಲ್ಲಿ ಜಿಜ್ಞಾಸುವಿನ ಲಕ್ಷಣ ಮೊದಲಾದವುಗಳನ್ನು ಹೇಳಿದೆ. ಅದು ಸದ್‌ವ್ಯವಹಾರವಾಗಿದೆ. ಅದನ್ನು ಇಲ್ಲಿ ಸಂಗ್ರಹವಾಗಿ ಹೇಳಿದೆ. ಜೀವನಿಗೆ ತನ್ನ ನಿಜಸ್ವರೂಪದ ಅನುಭವವಿರುವುದಿಲ್ಲ. ದೇಹದ ಅನುಭವ ಮಾತ್ರ ಇರುತ್ತದೆ. ಅದೇ ಪ್ರಕಾರ ಆತ್ಮನ ಅನುಭವಂತೂ ಇಲ್ಲ. ದೇಹಾಧ್ಯಾಸ ಮಾತ್ರವಿದೆ ಮತ್ತು ವೈರಾಗ್ಯ ಮೊದಲಾದ ಸಾಧನಗಳನ್ನು ಪ್ರಾಪ್ತ ಮಾಡಿಕೊಳ್ಳದೆ " ನಿಶ್ಚಯ-ನಿಶ್ಚಯ '' ಎಂದು ಚೀರುತ್ತಾರೆ. ಆದರೆ ಇಂಥ ನಿಶ್ಚಯವು ಸಾರಭೂತವೆನಿಸುವುದಿಲ್ಲ.

**ಆಗಳ್ ಜ್ಞಾನೀ ಥಈ ಗಯಾ, ವರ್ತ್‌ಮಾನ್‌ಮಾಂ ಹೋಯ್ ।**
**ಥಾಶೇ ಕಾಳ್ ಭವಿಷ್ಯಮಾಂ, ಮಾರ್ಗ್ ಭೇದ್ ನಹಿ ಕೋಯ್ ॥134॥**

ಹಿಂದಿನ ಕಾಲದಲ್ಲಿ ಆದ ಜ್ಞಾನಿಪುರುಷರು, ವರ್ತಮಾನ ಕಾಲದಲ್ಲಿ ಇರುವಂಥ ಜ್ಞಾನಿಪುರುಷರು, ಭವಿಷ್ಯತ್‌ಕಾಲದಲ್ಲಿ ಆಗುವಂಥ ಜ್ಞಾನಿಗಳು ಇವರೆಲ್ಲರ ಮಾರ್ಗದಲ್ಲಿ ಯಾವ ಅಂತರವೂ ಇಲ್ಲ. ಪರಮಾರ್ಥದೃಷ್ಟಿಯಿಂದ ಇವರೆಲ್ಲರ ಮಾರ್ಗವೂ ಒಂದೇ ಆಗಿದೆ. ಒಂದು ವೇಳೆ ಅದನ್ನು ಪಡೆಯುವುದಕ್ಕಾಗಿ ಮಾಡುವ ವ್ಯವಹಾರ, ಅದೇ ಪರಮಾರ್ಥದ ಸಾಧಕ ರೂಪದಲ್ಲಿರುವುದರಿಂದ ದೇಶಕಾಲಾದಿಗಳಿಂದ ಭಿನ್ನವಾಗಿ ಹೇಳಿದಂತೆ ಕಂಡರೂ ಅವೆಲ್ಲವೂ ಒಂದೇ ಫಲವನ್ನು ಉತ್ಪನ್ನ ಮಾಡುವುದರಿಂದ ಅವುಗಳಲ್ಲಿ ಪರಮಾರ್ಥದೃಷ್ಟಿಯಿಂದ ಭೇದವಿಲ್ಲ.

**ಸರ್ವ್ ಜೀವ್ ಛೇ ಸಿದ್ಧ್ ಸಮ್, ಜೇ ಸಮ್‌ಜೇ ತೇ ಥಾಯ್ ।**
**ಸದ್ಗುರು ಆಜ್ಞಾ ಜಿನ್‌ದಶಾ, ನಿಮಿತ್ತ್ ಕಾರಣ್ ಮಾಂಯ್ ॥135॥**

ಎಲ್ಲ ಜೀವರಲ್ಲಿಯೂ ಸಿದ್ಧಸತ್ತೆಯು ಸಮಾನವಾಗಿದೆ. ಅದು ಯಾರಿಗೆ ಪ್ರಕಟವಾಗುತ್ತದೆಯೋ ಅವರಿಗೇ ತಿಳಿಯುತ್ತದೆ. ಅದನ್ನು ಪ್ರಕಟ ಮಾಡಿಕೊಳ್ಳುವುದಕ್ಕಾಗಿ ಸದ್ಗುರುವಿನ ಆಜ್ಞೆಯಂತೆ ಪ್ರವೃತ್ತಿ ಮಾಡಬೇಕು. ಸದ್ಗುರುವು ಉಪದೇಶ ಮಾಡಿದ ಜಿನೇಂದ್ರ ಸ್ಥಿತಿ ದಶೆಯನ್ನು ವಿಚಾರ ಮಾಡಬೇಕು. ಇವೆರಡೂ ನಿಮಿತ್ತ ಕಾರಣವಾಗಿವೆ.

**ಉಪಾದಾನ್‌ನುಂ ನಾಮ್ ಲಈ, ಏ ಜೇ ತಜೇ ನಿಮಿತ್ತ್ ।**
**ಪಾಮೇ ನಹಿ ಸಿದ್ಧತ್ವನೇ, ರಹೇ ಭ್ರಾಂತಿಮಾಂ ಸ್ಥಿತ್ ॥136॥**

ಸದ್ಗುರುವಿನ ಆಜ್ಞೆ ಮೊದಲಾದವುಗಳು ಆತ್ಮ ಸಾಧನೆಗೆ ನಿಮಿತ್ತ ಕಾರಣಗಳಾಗಿವೆ. ಆತ್ಮನ ಜ್ಞಾನದರ್ಶನ ಮೊದಲಾದವುಗಳು ಅದರ ಉಪಾದಾನ ಕಾರಣಗಳಾಗಿವೆ. ಹೀಗೆ ಶಾಸ್ತ್ರದಲ್ಲಿ ಹೇಳಿದೆ. ಆದ್ದರಿಂದ ಯಾವನು ಉಪಾದಾನಗಳ ಹೆಸರನ್ನು ನಿಮಿತ್ತಮಾಡಿಕೊಂಡು ಉಳಿದ ನಿಮಿತ್ತಗಳನ್ನು ತ್ಯಾಗ ಮಾಡುವನೋ ಅವನು ಸಿದ್ಧತ್ವಗಳನ್ನು ಹೊಂದಲಾರನು. ಅವನು ಭ್ರಾಂತಿಯಲ್ಲಿಯೇ ಉಳಿದು ಬಿಡುವನು. ಯಾಕೆಂದರೆ ಶಾಸ್ತ್ರದಲ್ಲಿ ಆ ಉಪಾದಾನಗಳ ವ್ಯಾಖ್ಯೆಯ ಒಳ್ಳೆಯ ನಿಮಿತ್ತಗಳನ್ನು ನಿಷೇಧ ಮಾಡಿಲಿಕ್ಕೆಂದು ಇಲ್ಲ. ಆದರೆ ಶಾಸ್ತ್ರದಲ್ಲಿ ಹೇಳಿದ ಪರಮಾರ್ಥವು ಇಷ್ಟೇ ಆಗಿದೆ. ಉಪಾದಾನಗಳನ್ನು ಅಜಾಗೃತವಾಗಿ ಇಟ್ಟಲ್ಲಿ ಒಳ್ಳೆಯ ನಿಮಿತ್ತಗಳು ದೊರೆತರೂ ಕೂಡ ಕಾರ್ಯವು ಆಗದು. ಆದ್ದರಿಂದ ಒಳ್ಳೆಯ ನಿಮಿತ್ತಗಳು ಲಭಿಸಿದಲ್ಲಿ ಆ ನಿಮಿತ್ತಗಳ ಅವಲಂಬನವನ್ನು ಹೊಂದಿ ಉಪಾದಾನಗಳನ್ನು ಸಾಧಿಸಬೇಕು ಅಲ್ಲದೆ ಪುರಷಾರ್ಥಹೀನನಾಗಕೂಡದು.

**ಮುಖ್ ಥೀ ಜ್ಞಾನ್ ಕಥೇ ಅನೇ, ಅಂತರ್ ಛುಟ್ಯೋ ನ ಮೋಹ್ ।**
**ತೇ ಪಾಮರ್ ಪ್ರಾಣೀ ಕರೇ, ಮಾತ್ರ ಜ್ಞಾನಿನೋ ದ್ರೋಹ್ ॥137॥**

ಯಾವನು ಬಾಯಿಯಿಂದ ನಿಶ್ಚಯಪ್ರಧಾನ ಮಾತುಗಳನ್ನು ಹೇಳುವನೋ ಅಂಥವನಿಗೆ ಅಂತರಂಗದಲ್ಲಿ ಅವನ ಮೋಹವು ಬಿಡದೆ ಇದ್ದರೆ ಇಂತಹ ಪಾಮರ ಪ್ರಾಣಿಯು ಮಾತ್ರ ಕೇವಲಜ್ಞಾನಿಯೆಂದು ಹೇಳಿಸಿಕೊಳ್ಳುವ ಇಚ್ಛೆಯಿಂದ ಸತ್ ಜ್ಞಾನಿ ಪುರುಷರಿಗೆ ದ್ರೋಹ ಮಾಡಿದಂತೆ ಆಗುತ್ತದೆ.

**ದಯಾ, ಶಾಂತಿ, ಸಮ್‌ತಾ, ಕ್ಷಮಾ, ಸತ್ಯ, ತ್ಯಾಗ, ವೈರಾಗ್ಯ ।**
**ಹೋಯ್ ಮುಮುಕ್ಷು ಘಟ್ ವಿಷೇ, ಏಹ್ ಸದಾಯ್ ಸುಜಾಗ್ಯ ॥138॥**

ದಯೆ, ಶಾಂತಿ, ಸಮತೆ, ಕ್ಷಮೆ, ಸತ್ಯ, ತ್ಯಾಗ ಮತ್ತು ವೈರಾಗ್ಯ ಈ ಗುಣಗಳು ಮುಮುಕ್ಷುವಿನಲ್ಲಿ ಯಾವಾಗಲೂ, ಜಾಗೃತವಾಗಿರುತ್ತವೆ. ಈ ಗುಣಗಳಿಲ್ಲದೆ ಮುಮುಕ್ಷುತನವೇ ಇರುವುದಿಲ್ಲ.

**ಮೋಹ್‌ಭಾವ್ ಕ್ಷಯ್ ಹೋಯ್ ಜ್ಯಾಂ, ಅಥವಾ ಹೋಯ್ ಪ್ರಶಾಂತ್ ।**
**ತೇ ಕಹೀಯೇ ಜ್ಞಾನೀದಶಾ, ಬಾಕೀ ಕಹೀಏ ಭ್ರಾಂತ್ ॥139॥**

ಎಲ್ಲಿ ಮೋಹಭಾವದ ಕ್ಷಯವಾಗಿರುವುದೋ ಅಥವಾ ಎಲ್ಲಿ ಮೋಹದಶೆಯು ಕ್ಷೀಣವಾಗಿರುವುದೋ ಇಂಥವರಿಗೆ ಜ್ಞಾನಿಯ ದಶೆಯೆಂದು ಹೇಳಲಾಗುತ್ತದೆ. ಅದನ್ನು ಬಿಟ್ಟು ತನ್ನಲ್ಲಿಯೂ ಜ್ಞಾನವನ್ನು ಇದೆಯೆಂದು ತಿಳಿಯುವುದು ಕೇವಲ ಭ್ರಾಂತಿಯಾಗಿದೆ.

**ಸಕಳ್ ಜಗತ್ ತೇ ಏಠ್‌ವತ್, ಅಥವಾ ಸ್ವಪ್ನ ಸಮಾನ್ ।**
**ತೇ ಕಹೀಏ ಜ್ಞಾನೀದಶಾ, ಬಾಕೀ ವಾಚಾ ಜ್ಞಾನ್ ॥140॥**

ಎಲ್ಲ ಜಗತ್ತನ್ನು ಯಾವನು ಎಂಜಲಿಗೆ ಸಮಾನವೆಂದು ತಿಳಿದಿರುವನೋ, ಅಥವಾ ಯಾವ ಜ್ಞಾನದಲ್ಲಿ ಈ ಜಗತ್ತು ಸ್ವಪ್ನದಂತೆ ಭಾಸವಾಗುವುದೋ ಇದೇ ಜ್ಞಾನಾವಸ್ಥೆಯಾಗಿದೆ, ಉಳಿದುದೆಲ್ಲವೂ ಕೇವಲ ವಚನ ಜ್ಞಾನ-ಕಥನ ಜ್ಞಾನ ಎನಿಸುತ್ತದೆ.

**ಸ್ಥಾನಕ್ ಪಾಂಚ್ ವಿಚಾರಿನೇ, ಛಟ್ಠೇ ವರ್ತೇ ಜೇಹ್ ।**
**ಪಾಮೇ ಸ್ಥಾನಕ್ ಪಾಂಚ್‌ಮುಂ, ಏಮಾಂ ನಹಿ ಸಂದೇಹ್ ॥141॥**

ಐದೂ ಪದಗಳನ್ನು ವಿಚಾರಿಸಿ ಯಾವನು ಆರನೆಯ ಪದದಲ್ಲಿ ಪ್ರವೃತ್ತಿಯನ್ನು ಮಾಡುವನೋ-ಆ ಪದದಲ್ಲಿ ಮೇಲೆ ಹೇಳಿದ ಮೋಕ್ಷದ ಉಪಾಯಗಳಲ್ಲಿ ಪ್ರವೃತ್ತಿ ಮಾಡುವನೋ-ಅವನು ಐದನೆಯ ಪದವಾದ ಮೋಕ್ಷ ಪದವನ್ನು ಹೊಂದುವನು.

**ದೇಹ್ ಛತಾಂ ಜೇನೀ ದಶಾ, ವರ್ತೇ ದೇಹಾತೀತ್ ।**
**ತೇ ಜ್ಞಾನೀನಾ ಚರಣ್‌ಮಾಂ, ಹೋ ! ವಂದನ್ ಅಗಣಿತ್ ॥142॥**

ಯಾರಿಗೆ ಪೂರ್ವ ಪ್ರಾರಬ್ಧ ಯೋಗದಿಂದ ದೇಹ ಇದ್ದರೂ ಸಹ ಅವರ ಸ್ಥಿತಿಯು ದೇಹಾತೀತ ಅಂದರೆ ದೇಹಾದಿಗಳ ಕಲ್ಪನಾರಹಿತ ಆತ್ಮಮಯವಾಗಿರುವುದೋ ಅಂಥ ಜ್ಞಾನಿ ಪುರುಷರ ಚರಣ ಕಮಲದಲ್ಲಿ ಅನಂತ ವಂದನೆಗಳನ್ನು ಅರ್ಪಿಸುವೆ! ವಂದನೆಗಳನ್ನು ಅರ್ಪಿಸುವೆ!

**ಶ್ರೀಸದ್ಗುರುಚರಣಾರ್ಪಣಮಸ್ತು !**

ಶ್ರೀ ನಡಿಯಾದ್, ಗುರುವಾರ ವಿ.ಸಂ. 1952 (ಕ್ರಿ.ಶ. 1896)
ಆಶ್ವಯುಜ ಕೃಷ್ಣ 1,



# APPENDIX A

## SRIMAD RAJCHANDRAJI
### *Mahatma Gandhiji's Spiritual Guide*

There in the solitary caves of ancient seekers' abode Idar in Gujarat, remained deeply absorbed in his Meditations and Self-Realisation forgetting his Physical entity, a very great but very much hidden, very much unassuming and very much publicity-evading soul, just a century before.

He used to run his practical business of Jewellery at Bombay just to fulfill his worldly obligations and duties, but most of his time passed in solitude at Idar and other lonely places. He transformed his realisations and the spirit of Ahimsa and Anekanta into every inch of his living practice.

He was the great and unique modern Jain Seer of this age SRIMAD RAJCHANDRAJI, the spiritual Guide of MAHATMA GANDHIJI, the unequalled present path-seeker of salvation, who was living only for Self-Realisation as Gandhiji himself wrote about him in his Autobiography :

"He was a man of great character and learning. He was also known as a 'SHATAVADHANI'.... The thing that did cast its spell over me I came to know afterwards. This was his wide knowledge of scriptures, his spotless character and his burning passion for Self-Realisation. I saw later that this *last* was the only thing for which he lived."

[---"The Story of my Experiments with Truth"; Part II, chapter I, pp.112-13]

Gandhiji was so much impressed by him that, as he himself said, he did not find any religious person of Srimad Rajchandra's status in the current times in India. He himself learnt the first lesson of Ahimsa-Non-Violence, Compassion & Mercy from him. On one occasion of Srimad Rajchandaji's Jayanti at Ahmedabad, Gandhiji publicly paid tribute to Srimadji's greatness in these words:

"For several years, I have been in search of a religious man in India, but I have so far not come across any person who could compete with Srimad Rajchandrabhai. He mostly used to say that he did not belong to any sect or tradition or fragment, nor did he intend to limit himself to them. These are all sub-religions, the "limited" ones, while religion is 'Infinite' or 'limitless', which cannot be defined at all !".

Srimad Rajchandraji played a very great role in guiding and stablilizing Gandhiji, the then Barrister M.K. Gandhi, in his early days in East Africa, into his own fold and faith of Hinduism. Influenced and encircled by the Clergymen in Africa, the Barrister's foundation of his own faith was shaken, he had become wavering and was even going to be converted into Christianity. He wrote at length to Srimad Rajchandraji at Bombay. The Postal Discussions went on. Srimadji sent him not the books of Jainism but Gandhiji's own Hinduism such as BHAGVADGITA, YOGVASISTHA MAHA RAMAYANA, PANCHADASHI, etc. and replied with analytic depth and logic, Gandhiji's important questions and doubts. These have come out in a booklet form in Gujarati and now in English.

**One of the replies on God, Atman and Universe:**

"God is Atman, free from all bonds of Karma. Atman, in its pristine state, is pure consciousness, total intelligence, all-strength, all-knowledge. There is no first cause mightier than or exterior to the Atman in its pure, pristine state.

"Both the Atman and the Universe are eternal - without beginning and without end. My reason cannot envisage either final extinction or permanent liberation of all Atmans nor dissolution, in the sense of utter annihilation, of the entire cosmos. Both Cosmos and the Atmans are in a perpetual state of flux, and will endure for all time." (Translated by Gandhiji's secretary Pyarelalji.)

It was again the impartial greatness of Srimadji that he did not advise or even indicate Gandhiji to convert into Jainism, but Gandhiji himself got influenced at his hands into the main spirit of AHIMSA-the heart of Jainism.

**Impartial Srimadji wrote to Gandhiji :**

"I do not have any partiality, whatever religion you belong to. I only wish that you should follow such a religion, such a code of conduct, such a devotion that may lead you to eradicate the blemishes of worldly life..........!"

Such and other letters are the treasure and testimony of the Unique greatness, secular spirit and religious generousity and tolerance of Srimad Rajchandraji.

Mahatma Gandhiji's Spiritual Heir and Great Secular Scholar and Initiator of Sarvodaya-Bhoodan Movement Acharya VINOBA BHAVE has paid glowing tribute to this unparallel greatness of Srimad Rajchandraji in one of his Marathi Letters dated 17-11-1935, written from Pavnar near Wardha. He has written :

"Raichandbhai became instrumental in strengthening Bapu (Gandhiji)'s faith in Hinduism this, a service which had naturally taken shape at his hands but from the view point of public, was his best act. In my opinion, his superb service is to manifest in himself, a burning zeal for Self-Realisation".

### GANDHIJI'S FIRST ACQUAINTANCE WITH RAJCHANDRAJI

Before going in depth about Gandhiji's various impressions and writings or speeches on Srimad

Rajchandraji who strengthened his faith in his own fold of Hinduism, it will be interesting and useful to have a glimpse of Gandhiji's first and primary acquaintances with Srimadji.

It was the month of July in 1891 A.D., one Hundred years ago. Gandhiji, the then Barrister M.K. Gandhi, had returned from England after his studies in Law. He had put up with Dr. Pranjivandas Mehta at Bombay, whose niece was married to Rajchandraji, then known as Poet Raychandbhai. Dr. Mehta was the person to introduce Rajchandraji saying about him:

"In spite of being a poet he is associated with us in Business. He is a very knowledgeable person, a Gyani, a Shatavadhani [one who is capable of attending to one hundred things at a time and recollecting the same in order]."

Someone suggested to Gandhiji at that time that "Why don't you narrate a few words to Raychandbhai ? He will repeat them in the same order irrespective of whatsoever language".

Gandhiji, astonished at listening this, narrates the incidence clarifying his own condition of that time :-

"Young man was I, returned from England, showy of my knowledge of Language, no less was the influence of the west upon me. Returned from Abroad means descended from Heaven ! I made a big show of expressing the whole of my knowledge and first of all I wrote down words of different languages-----because where was I capable to hold that order in my memory ? I read out those words thereafter. What a surprise that Raychandbhai slowly and smoothly repeated all these words in the same order ! I was pleased, greatly astonished and cultivated my high opinion about the Memory Power of the Poet. This experience should be good enough to calm down my pride of the Western influence........"

Gandhiji was so much impressed at this very first acquaintance by Rajchandraji that he felt such a Memory, such a knowledge and that too of a not much school-education-possessing and a little elder to him (just by one year and ten months) person was rare. Even he was so much respected without going out of India. This thing made Gandhiji to realise that one need not go abroad to gather respect and memory could not be purchased from the school and so also knowledge !

As mentioned previously, Gandhiji was impressed not only by this memory power and knowledge of Rajchandraji, but by his "SPOTLESS CHARACTER AND HIS BURNING PASSION FOR SELF REALISATION" also about which he came to know after coming in more contact with him after the above mentioned First Acquaintance.

Truth-seeker Gandhiji frankly writes about his own inner condition of that time:

"My spiritual state was that of a knowledge-seeker (JIGYASU) only when we met first. There remained doubts in mind about several questions.........I had a little knowledge about Religion, Hinduism, Geeta etc. at that time. I am not talking here of whatever I had acquired from my parents. It was not so that had I known much about religion through my own efforts. But I used to have eagerness to know about religion. Hence I liked the acquaintance of Raychandbhai and I got influenced by his words."

Gandhiji records on page 113-114, in his autobiography, "The story of my Experiments with Truth", also :-

"Raychandbhai's commercial transactions covered hundreds of thousands. He was a connoisseur of pearls and diamonds. No knotty business problem was too difficult for him. But all these things were not the centre around which his life revolved. That centre was the passion to see God face to face. Amongst the things on his business table there were invariably to be found some religious book and his diary. The moment he finished his business he opened the religious book or the diary. The man who, immediately on finishing his talk about weighty business transactions, began to write about the hidden things of the spirit could evidently not be a businessmen at all, but a real seeker after Truth. And I saw him thus absorbed in godly pursuits in the midst of business, not once or twice, but very often. I never saw him lose his state of equipoise. There was no business or other selfish tie that bound him to me, and yet I enjoyed the closest association with him. I was but a briefless barrister then, and yet whenever I saw him he would engage me in conversation of a seriously religious nature. Though I was then groping and could not be said to have any serious interest in religious discussions, still I found his talk of absorbing interest. I HAVE SINCE MET MANY A RELIGIOUS LEADER OR TEACHER. I HAVE TRIED TO MEET THE HEADS OF VARIOUS FAITHS, AND I MUST SAY THAT NO ONE ELSE HAS EVER MADE ON ME THE IMPRESSION THAT RAYCHANDBHAI DID. HIS WORDS WENT STRAIGHT HOME TO ME. HIS INTELLECT COMPELLED AS GREAT A REGARD FROM ME AS HIS MORAL EARNESTNESS; AND DEEP DOWN IN ME WAS THE CONVICTION THAT HE WOULD NEVER WILLINGLY LEAD ME ASTRAY AND WOULD ALWAYS CONFIDE TO ME HIS INNERMOST THOUGHTS. IN MY MOMENTS OF SPIRITUAL CRISIS, THEREFORE, HE WAS MY REFUGE."

"Though I could not place Raychandbhai on the throne of my heart as Guru, we shall see he was, on many occasions, my guide and helper...........".

